

# ಚಂದಮಾಮ

ಏಪ್ರಿಲ್ 1984



## ಈ ಸಂಚಿಕೆಯಲ್ಲಿ






ಬಿಡಿ ಪ್ರತಿ ರೂ. ೨-೦೦

ವಾರ್ಷಿಕ ಚಂದಾ ರೂ. ೨೪-೦೦

# ಚಂದಮಾಮ

ಸಂಸ್ಥಾಪಕರು : 'ಚಕ್ರಪಾಣಿ'
ಸಂಚಾಲಕರು : ನಾಗಿರೆಡ್ಡಿ

---

ಪದವಿ ಅಂತಸ್ತುಗಳ ಆಧಾರದಲ್ಲಿ ಕೆಳಗಿನ ಉದ್ಯೋಗಸ್ಥರ ಮೇಲೆ ಅಧಿಕಾರ ಚಲಾಯಿಸುವ ಪದ್ಧತಿ ಹೊಸದೇನಲ್ಲ. ಅಂಥವರು ಎಲ್ಲಾ ಉದ್ಯೋಗಸ್ಥರನ್ನೂ ಒಂದೇ ದೃಷ್ಟಿಯಿಂದ ನೋಡಿದರೆ, ಸಮರ್ಥನೆನಿಸಲು ಸಾಧ್ಯವೆ ? ಉದ್ಯೋಗಸ್ಥರೊಳಗೆ ಬೇರೆ ಬೇರೆ ಮನೋಭಾವದವರೂ ಇರುವರಷ್ಟೆ? ಅದನ್ನು ಕೂಡಾ ಗಮನದಲ್ಲಿಟ್ಟುಕೊಂಡರಷ್ಟೇ ಅಧಿಕಾರ. ಅಂಥವನು ಆ ಪದವಿಗೆ ಅರ್ಹನಾದ ಸಮರ್ಥನೆನ್ನಬಹುದು. " ಸಮರ್ಥನು " ಎಂಬ ಈ ಸಂಚಿಕೆಯಲ್ಲಿರುವ ಕಥೆ ಈ ವಿಷಯವನ್ನು ಚೆನ್ನಾಗಿ ವಿವರಿಸುವಂತಹುದು.

## ಅಮರವಾಣಿ

ನ ತತ್ ಶಸ್ತ್ರೈಃ ನ ನಾಗೇಂದ್ರೈಃ ನ ಹಯೈಃ ನ ಪದಾತಿಭಿಃ
ಕಾರ್ಯಂ ಸಂಸಿದ್ಧಿ ಮಾಪ್ನೋತಿ ಯದ್ ಬುದ್ಧ್ಯಾ ಪ್ರಸಾಧಿತಮ್

ಬುದ್ಧಿಶಕ್ತಿಯೇ ಎಲ್ಲಕ್ಕಿಂತಲೂ ಹೆಚ್ಚಿನದು. ಆಯುಧಗಳಿಂದ, ಆನೆಗಳಿಂದ, ಕುದುರೆಗಳಿಂದ, ಕಾಲ್ಬಲಗಳಿಂದ ಸಾಧಿಸಲಾಗದ ಕೆಲಸವನ್ನು ಬುದ್ಧಿಶಕ್ತಿ ಸಾಧಿಸುತ್ತದೆ.

---

ಸಂಪುಟ : ೭೨ ಏಪ್ರಿಲ್ '೮೪ ಸಂಚಿಕೆ : ೪

ಬಿಡಿ ಪ್ರತಿ ರೂ. ೨-೦೦ :: ವಾರ್ಷಿಕ ಚಂದಾ ರೂ. ೨೪-೦೦



# ಚಂದಮಾಮನ ಹರಟೆ



## ಮಾತಾಡುವ ಆನೆ

ಸೋವಿಯತ್ ರಷ್ಯಾದ ಕೊರಗಾಂಡಾ ಪ್ರಾಣಿ ಪ್ರದರ್ಶನ ಶಾಲೆಯಲ್ಲಿರುವ 'ಬಾಟಿರ್' ಎಂಬ ಆನೆ ತನ್ನ ಹೆಸರು ಹೇಳುತ್ತದೆ. ಇನ್ನೂ ಅದು ಬರುವವರನ್ನು ನೋಡಿ, "ಒಳ್ಳೇ ಹುಡುಗಾ" ಅನ್ನುತ್ತದೆ. ದಿನಾ ಅಲ್ಲಿಗೆ ಬರುವವರಿಂದ ಆ ಆನೆ ಮಾತುಗಳನ್ನು ಕಲಿಯಿತೆಂದು ತಿಳಿಯುತ್ತದೆ. ಮಾತುಗಳನ್ನು ಅನುಕರಿಸುವ ಅದ್ಭುತ ಶಕ್ತಿ ಈ ಆನೆಗೆ ಇದೆ.

## ಅಲ್ಲಲ್ಲಿ ವಾನರ ಮಾನವರು

ಚೈನಾದೊಳಗಿನ ಹೂಬೀ ಪರ್ವತ ಪ್ರಾಂತದಲ್ಲಿ ಇತ್ತೀಚೆಗೆ ಕೆಲವರು ವಾನರ ಮಾನವರು ಕಾಣಿಸಿದರು. ಶರೀರವೆಲ್ಲಾ ತಾಮ್ರವರ್ಣದ ಕೂದಲುಗಳಿಂದ ಏಳು ಅಡಿಗಳಷ್ಟು ಎತ್ತರವಿರುವ ಈ ವಾನರ ಮಾನವರು ಎಲೆ ಚಿಗುರುಗಳನ್ನು ತಿನ್ನುತ್ತ ಮರಗಳ ಕೊಂಬೆಗಳನ್ನು ದಾಟುವಾಗ ಕಂಡು ಬಂದರಂತೆ!





## ಚಂದ್ರನಿಂದ ಸೂರ್ಯ ಕಿರಣಗಳು !

ಫ್ರಾನ್ಸ್ ದೇಶದ ರಾಷ್ಟ್ರೀಯ ವ್ಯೋಮ ಸಂಶೋಧನಾ ಕೇಂದ್ರಕ್ಕೆ ಸೇರಿದ ಕ್ರಿಸ್ಟಿಯನ್ ಮಾರ್ಚೆಲ್ ಎಂಬ ಶಾಸ್ತ್ರಜ್ಞನು, ರಾತ್ರಿಯನ್ನು ಹಗಲಾಗಿ ಮಾರ್ಪಡಿಸುವ ವಿಧಾನವನ್ನು ರೂಪುಗೊಳಿಸುತ್ತಿದ್ದಾನೆ. ದೊಡ್ಡ ದೊಡ್ಡ ಕನ್ನಡಿಗಳನ್ನು ಚಂದ್ರನ ಮೇಲೆ ಸೇರುವಂತೆ ಮಾಡಿ, ತಕ್ಕ ಉಪಕರಣಗಳ ಮೂಲಕ ಅವುಗಳನ್ನು ಅಲ್ಲಿ ಅಳವಡಿಸಿಟ್ಟರೆ, ಕನ್ನಡಿಗಳ ಮೇಲೆ ಬೀಳುವ ಸೂರ್ಯ ಕಿರಣಗಳು, ಹಾಗೆಯೇ ಭೂಮಿಯ ಮೇಲೆ ಪ್ರತಿಬಿಂಬಿಸಿ, ಕೆಲವು ಪ್ರಾಂತಗಳಲ್ಲಾದರೂ ರಾತ್ರಿಯನ್ನು ಹಗಲಾಗಿ ಮಾಡುವ ಅವಕಾಶವಿದೆ ಎನ್ನುತ್ತಾನೆ ಈ ಶಾಸ್ತ್ರ ಪ್ರವೀಣ!

## ನಿಮಗೆ ಗೊತ್ತೇ?

೧. ಹರ್ಷವರ್ಧನನ ಆಸ್ಥಾನವನ್ನು ಅಲಂಕರಿಸಿದ ಕವಿ ಯಾರು ? ಅವನು ರಚಿಸಿದ ಗ್ರಂಥ ಯಾವುದು?

೨. ೧೯ ನೇ ಶತಮಾನದಲ್ಲಿ ಪ್ರಸಿದ್ಧಿ ಪಡೆದ ಆಂಗ್ಲ ದಂಪತಿಗಳು ಯಾರೆಂದು ನಿಮಗೆ ಗೊತ್ತೇ ?

೩. ಇಂಗ್ಲೆಂಡಿನಲ್ಲಿ ಹತ್ತೊಂಬತ್ತನೇ ಶತಾಬ್ದದಲ್ಲಿ ಕಾದಂಬರಿ ರಚಯಿತ್ರಿಣಿಯರಾಗಿ ಪ್ರಸಿದ್ಧರಾದ ಸೋದರೀಮಣಿಯರು ಯಾರು?

೪. ಬಾಲ ಸಾಹಿತ್ಯದಲ್ಲಿ ಪ್ರಸಿದ್ಧಿ ಪಡೆದ ಡೇನಿಷ್ ಸಾಹಿತಿ ಯಾರೆಂದು ನಿಮಗೆ ಗೊತ್ತೇ?

೫. ತನ್ನ ಮನೆಯ ಹೆಸರನ್ನು ಬಗೆಬಗೆಯ ಅಕ್ಷರಗಳಿಂದ ಬರೆದ ಪ್ರಸಿದ್ಧ ಆಂಗ್ಲ ಕವಿ ಯಾರು?

(ಉತ್ತರ ೬೪ ನೇ ಪುಟದಲ್ಲಿ)



# ಸುಳ್ಳಿನ ಮೇಲೆ ಸುಳ್ಳು

ಹಿಂದೆ ಮಾಧವ ಮಾಳವೆಂಬ ಊರಿನ ಜಮೀನ್ದಾರರ ಹತ್ತಿರ ಗೋವಿಂದನೆಂಬ ಯುವಕನು ಸೇವಕನಾಗಿದ್ದನು. ಅವನ ತಂದೆ ಜಮೀನ್ದಾರರ ಮನೆಯಲ್ಲಿ ಆಳಾಗಿ ದುಡಿಯುತ್ತ, ಗೋವಿಂದನು ಚಿಕ್ಕವನಾಗಿರುವಾಗಲೇ ತೀರಿ ಹೋದನು. ಅವನಿಗೆ ತಾಯಿಯ ಹೊರತು ಬೇರೆ ಸಮೀಪದ ಬಂಧುಗಳೆಂದು ಯಾರೂ ಇರಲಿಲ್ಲ. ಜಮೀನ್ದಾರರು ಅವನ ಮೇಲೆ ಕನಿಕರಗೊಂಡು, ತನ್ನ ಮನೆಯಲ್ಲೇ ಬೆಳೆಸಿ, ತಂದೆಯ ನೌಕರಿಯನ್ನೇ ಅವನಿಗೆ ಕೊಟ್ಟು, ಬಹಳ ದಯೆಯಿಂದ ನೋಡಿಕೊಳ್ಳುತ್ತಿದ್ದರು. ಅವನಿಗೆ ಈಗ ಹದಿನೆಂಟನೆಯ ವಯಸ್ಸು.

ಒಂದು ಸಾರಿ ಜಮೀನ್ದಾರರು ಗೋವಿಂದನಿಗೆ ಮುಖ್ಯವಾದ ಒಂದು ಕೆಲಸವನ್ನು ಹೇಳಿದರು. ಅವರ ಮಗಳಿಗೆ ಬರುವ ಪೌರ್ಣಮಿಯ ದಿನ, ಪಕ್ಕದ ಊರಿನ ಜಮೀನ್ದಾರರ ಮಗನೊಂದಿಗೆ ವಿವಾಹದ 'ನಿಶ್ಚಿತಾರ್ಥ'ವೆಂದು ಗೊತ್ತುಮಾಡಲಾಗಿತ್ತು. ಕಾರಣಾಂತರದಿಂದ ಆ ಮುಹೂರ್ತವನ್ನು ಬಿದಿಗೆಯ ದಿನಕ್ಕೆ ಮುಂದುವರಿಸಿಡಬೇಕಾಯಿತು. ಈ ವಿಷಯವನ್ನು ಆ ಜಮೀನ್ದಾರರಿಗೆ ತಿಳಿಸಿ ಬರಬೇಕೆಂದು ಗೋವಿಂದನನ್ನು ನಿಯೋಗಿಸಿ, ಜಮೀನ್ದಾರರು ನಗರದಲ್ಲಿ ತನಗಿರುವ ಏನೋ ಕೆಲಸಕ್ಕೆ ಹೊರಟು ಹೋದರು.

ಗೋವಿಂದನು ಪಕ್ಕದ ಊರಿನ ಜಮೀನ್ದಾರರಲ್ಲಿಗೆ ಹೊರಡಲಿರುವಾಗ, ಮೊದಲು ದಿವಾನನು ಅವನಿಗೆ ಕೆಲವು ತುರ್ತು ಕೆಲಸಗಳನ್ನು ಹೇಳಿದನು. ತರುವಾಯ ಅಮ್ಮನವರೂ, ಮಗಳೂ ಮತ್ತೇನೋ ಕೆಲಸಗಳನ್ನು ಹೇಳಿದರು. ಅದೆಲ್ಲಾ ಮುಗಿದಾಗ ಮಧ್ಯಾಹ್ನ ದಾಟಿ, ಅಪರಾಹ್ನವೂ ತಿರುಗಿತು. ಸೂರ್ಯನು ಮುಳುಗಲು ಇನ್ನೊಂದು ಗಂಟೆ ಇದೆ ಎನ್ನುವಾಗಷ್ಟೇ ಹೊರಡಲು ಬಿಡುವು ಸಿಕ್ಕಿತು.

ಇನ್ನು ಮದುಮಗನ ಊರಿಗೆ ಹೋಗಿ, ಸಮಾಚಾರವನ್ನು ಹೇಳಿ, ಸರಿಯಾಗಿಲ್ಲದ ಅಂಕುಡೊಂಕು, ಏರುತಗ್ಗಾದ ದಾರಿಯಲ್ಲಿ ರಾತ್ರಿಯ ಹೊತ್ತಿನಲ್ಲಿ ಹಿಂದಿರುಗಿ ಬರುವುದೆಂದರೆ ಸಾಧ್ಯವಾಗುವ ಮಾತಲ್ಲ. ಆದರೆ ಯಜಮಾನರು ಹೇಳಿದ್ದು ಮುಖ್ಯವಾದ ಮಾತಾದುದರಿಂದ ಹೋಗದಿರಲೂ ಸಾಧ್ಯವಿಲ್ಲ.

ಗೋವಿಂದನು ಏನು ಮಾಡುವುದೆಂದು ಆಲೋಚಿಸುವಾಗ, ವೃದ್ಧ ನೌಕರನು ಅವನ ಸಂಗತಿಯನ್ನು

ಬಿ. ಎ. ರಾವ್



ತಿಳಿದು, "ಹಾವು ಹರಣೆಗಳು ತಿರುಗುವ ರಾತ್ರಿ ಪ್ರಯಾಣವು ಒಳ್ಳೆಯದಲ್ಲಪ್ಪ. ನಿಶ್ಚಿತಾರ್ಥಕ್ಕೆ ಹೇಗೂ ಇನ್ನೂ ನಾಲ್ಕು ದಿನಗಳ ಗಡುವಿದೆ. ನಾಳೆ ಮೈಸರಿಯಿಲ್ಲವೆಂದು ರಜೆ ತೆಗೆದುಕೊಂಡು ಆ ಊರಿಗೆ ಹೋಗಿ ಹೇಳಿ ಬಂದುಬಿಡು. ನಗರಕ್ಕೆ ಹೋದ ಯಜಮಾನರು ರಾತ್ರಿಯಲ್ಲಿ ಬಂದು ಕೇಳಿದರೆ, ಸಮಾಚಾರ ಹೇಳಿಬಂದೆನೆಂದು ಹೇಳಿಬಿಡು. ರಗಳೆ ಏನೂ ಬಾರದು. ಹೇಗೂ ನಾಳೆ, ಹೋಗಿ ಹೇಳುವಿಯಲ್ಲ ?" ಎಂದು ಆಲೋಚನೆ ಹೇಳಿದನು.

ಈ ಸಲಹೆ ಗೋವಿಂದನಿಗೆ ಹಿಡಿಸಿತು. ರಾತ್ರಿ ಜಮೀನ್ದಾರರು ನಗರದಿಂದ ಬಂದ ಕೂಡಲೇ, "ಏನೋ, ಗೋವಿಂದಾ ! ಅಲ್ಲಿಗೆ ಹೋಗಿ ಹೇಳಿದಿಯಾ ?" ಎಂದು ಕೇಳಿದರು. "ಹೇಳಿ ಬಂದೆನು ಅಯ್ಯಾ !" ಎಂದನು ಗೋವಿಂದ.

"ಅವರ ಮನೇಲಿ ಯಾರ ಹತ್ತಿರ ಹೇಳಿದೆಯೋ ? ಜಮೀನ್ದಾರ್ರ ಹತ್ತಿರವೇ ಹೇಳಿದೆಯಾ ?" ಎಂದು ಯಜಮಾನರು ಇನ್ನೊಂದು ಹೊಸ ಪ್ರಶ್ನೆ ಮಾಡಿದರು. "ಜಮೀನ್ದಾರ್ರೇ ಮನೇಲಿದ್ದರು. ಅವರ ಹತ್ತಿರವೇ ಹೇಳಿದೆ" ಎಂದನು ಗೋವಿಂದ.

"ಅದಕ್ಕೆ ಅವರು ಏನು ಹೇಳಿದರು ?" ಎಂದು ಪುನಃ ಕೇಳಿದರು ಜಮೀನ್ದಾರರು.

"ಅಂಥಾದ್ದೇನೂ ಹೇಳಲಿಲ್ಲ. ಹಾಗೇ ಆಗಲಿ ಎಂದರು, ಅಷ್ಟೇ" ಎಂದು ಉತ್ತರ ಕೊಟ್ಟನು ಗೋವಿಂದ.

ಆದರೆ ಜಮೀನ್ದಾರರು ಸುಮ್ಮನಾಗದೆ, "ಅಲ್ಲೋ ಗೋವಿಂದಾ, ದಾರಿಯಲ್ಲಿರುವ ಆ ಹೊಳೆಗೆ ನೆರೆ ಬಂದಿತೆಂದು ಹೇಳುತ್ತಾರಲ್ಲಾ ? ಹೇಗೆ ದಾಟಿ ಹೋದೆಯಪ್ಪಾ ?" ಎಂದು ಕೇಳಿದರು.

ಅದಕ್ಕೆ ಗೋವಿಂದನು ತಟಕ್ಕನೆ, "ಅದರಿಂದೇನೂ ತೊಂದರೆಯಾಗಿಲ್ಲ ಅಯ್ಯಾ. ನನಗೆ ಈಜು ಗೊತ್ತಿದೆಯಷ್ಟೆ ? ಹೋಗುವಾಗ ಸ್ವಲ್ಪ ಈಜಿದೆ. ಬರುವಾಗ ತೆಪ್ಪ ಸಿಕ್ಕಿತು. ಕಷ್ಟವೇನೂ ಆಗಲಿಲ್ಲ" ಎಂದನು.

ಜಮೀನ್ದಾರರು ತಲೆದೂಗುತ್ತ, "ಅಲ್ಲಿ ಜಮೀನ್ದಾರ್ರ ಮಗ, ಅದೇ ಮದುಮಗ ಹುಡುಗ, ಅವನ ಸೋದರ ಮಾವನ ಮನೆಯಿಂದ ನಿನ್ನೆ ಹಿಂದಿರುಗುತ್ತಾನೆಂದು ಹೇಳಿದ್ದರು. ಮನೆಗೆ ಬಂದಿದ್ದನೇನು ?" ಎಂದು ಕೇಳಿದರು.

"ಮನೆಯಲ್ಲೇ ಇದ್ದರು. ಯಾವಾಗ ತಿರುಗಿ ಬಂದರೋ ನನಗೆ ಗೊತ್ತಿಲ್ಲ, ಅವರು ಮನೆಯಲ್ಲಿರುವುದನ್ನು ನೋಡಿದೆ" ಎಂದು ಗೋವಿಂದನು ಉತ್ತರ ಕೊಟ್ಟನು.

"ಸರಿಸರಿ, ಇದ್ದಾನೆಂದಾಯಿತು. ಅವರ ಮನೆಯ ಚಾವಡಿಯ ಪಕ್ಕದಲ್ಲಿರುವ ಮಾವಿನ ಮರ ಹೂಬಿಟ್ಟಿದೆಯಾ ಗೋವಿಂದಾ ?" ಎಂದು ಮತ್ತೇನೋ ಯೋಚಿಸಿ ಪ್ರಶ್ನೆ ಮಾಡಿದರು ಯಜಮಾನರು. ಅದು ಸಾಧಾರಣವಾಗಿ ಮಾವಿನ ಮರವು ಹೂ

ಬಿಡುವ ಕಾಲವೇ ಆದುದರಿಂದ, ಗೋವಿಂದನು ಸಂಶಯ ತಾಳದೆ, "ಈಗಲಷ್ಟೇ ಹೂ ಬಿಡಲು ಶುರುವಾದ ಹಾಗೆ ಕಾಣುತ್ತದೆ. ತುಂಬಾ ಹೂ ಇನ್ನು ಮೇಲೆ ಬಿಡಬೇಕಷ್ಟೇ" ಎಂದನು.

ಹೀಗೆ ಒಂದರ ಮೇಲೊಂದಾಗಿ ಸುಳ್ಳು ಹೇಳಬೇಕಾಗಿ ಬರುವುದನ್ನು ನೋಡಿ ಗೋವಿಂದನಿಗೆ ಬಹಳ ಸಂಕಟವಾಯಿತು. ಇನ್ನೇನೂ ಕೇಳದೆ ಬಿಟ್ಟರೆ ಸಾಕೆಂದುಕೊಂಡು ಅತ್ತ ಹೋಗಲು ನೋಡುವಾಗ ಯಜಮಾನರು, "ಅಲ್ಲೋ ಗೋವಿಂದಾ, ಅವರ ಕಪ್ಪು ಆಕಳು ಈ ಮಧ್ಯೆ ಹುಲ್ಲು ನೀರು ಮುಟ್ಟದೆ ಏನೋ ರೋಗದಲ್ಲಿದೆಯೆಂದು ಕೇಳಿದ್ದೆ. ಈಗ ಹೇಗಿದೆಯಂತೆ ?" ಎಂದು ಕೇಳುತ್ತಾ, ಕುರ್ಚಿಯಲ್ಲಿ ಕುಳಿತರು.

ಇದಕ್ಕೇನು ಹೇಳುವುದೆಂದು ಥಕ್ಕನೆ ಗೋವಿಂದನಿಗೆ ಹೊಳೆಯಲಿಲ್ಲ. ಜಮೀನ್ದಾರರಂಥವರು ದನಗಳಿಗೆ ಕೂಡಲೇ ವೈದ್ಯ ಮಾಡದೆ ಹೋಗುತ್ತಾರೇನು ? ಅದು ಈಗ ಚೆನ್ನಾಗಿಯೇ ಇದ್ದೀತು ಎಂಬ ಧೈರ್ಯದಲ್ಲಿ, "ಆ ಕಪ್ಪು ದನವೇ ? ಅಂಗಳದ ಬದಿಯಲ್ಲೇ ನಿಂತಿದ್ದಿತು. ಅದಕ್ಕೀಗ ಯಾವ ರೋಗವೂ ಇಲ್ಲದೆ ಚೆನ್ನಾಗಿದೆ ಆಯ್ಯಾ" ಎಂದನು.

ಅವನ ಮಾತು ಕೇಳಿ ಜಮೀನ್ದಾರರು ಮೀಸೆಯೊಳಗೇ ನಗುತ್ತ, "ಹುಂ. ಅಲ್ಲಿ ಊಟ ಮಾಡಿದೆಯೇನೋ ಗೋವಿಂದಾ ?" ಎಂದು ಕೇಳಿದರು.

ನಿಜಕ್ಕೂ ಅವನಿಗೆ ಆ ಸಮಯದಲ್ಲಿ ಹಸಿವೆಯಾಗುತ್ತಾ ಇದ್ದಿತು. ತಾನು ಆ ಜಮೀನ್ದಾರರ ಮನೆಯಲ್ಲಿ ಊಟ ಮಾಡಿಲ್ಲವೆಂದರೆ, ಅವರನ್ನು ಕೀಳ್ಮಟ್ಟಕ್ಕಿಳಿಸಿದಂತೆ ಆಗುವುದೆಂದುಕೊಂಡು, "ಹೊಟ್ಟೆ ತುಂಬ ಊಟ ಹಾಕಿದರು ಅಯ್ಯ. ಇನ್ನು ನಾನು ಹೋಗಲ[illegible]ಯ್ಯಾ ?" ಎಂದನು.

ತಾನು ಇನ್ನೂ ಎಷ್ಟು ಸುಳ್ಳು ಹೇಳಬೇಕಾಗಿ ಬರುವುದೋ ಎಂದು ಗೋವಿಂದನಿಗೆ ದಿಗಿಲು.



"ಇಲ್ಲಿ ಬಾ, ಒಂದೇ ಮಾತು. ನನ್ನ ಇದಿರಿನಲ್ಲಿ ನಿಂತು ಹೇಳು. ಹೀಗೆಲ್ಲಾ ಬಹಳ ಸಲೀಸಾಗಿ ಸುಳ್ಳು ಹೇಳಲಿಕ್ಕೆ ನೀನು ಯಾವಾಗ ಕಲಿತಿದ್ದು ?" ಎಂದು ಅವನ ಮುಖವನ್ನು ನೋಡುತ್ತಾ ಕೇಳಿದರು ಜಮೀನ್ದಾರರು.

ತಾನು ಸುಳ್ಳು ಹೇಳಿದುದೆಲ್ಲಾ ಜಮೀನ್ದಾರ ಯಜಮಾನರಿಗೆ ಗೊತ್ತಾಯಿತೆಂದು ತಿಳಿದು ಗೋವಿಂದನು ಹೆದರಿ ನಡುಗಿದನು.

ಜಮೀನ್ದಾರರು ಶಾಂತ ಮುಖದಿಂದ ನಗುತ್ತ, "ಎಲೋ, ಯಾವುದೋ ಕಾರಣದಿಂದ ನೀನು ಅಲ್ಲಿಗೆ ಹೋಗಲಿಲ್ಲ ಅಂತ ಇಟ್ಟುಕೊಳ್ಳುವಾ. ಆ ಕಾರಣ ನನ್ನ ಹತ್ತಿರ ಹೇಳಿಬಿಟ್ಟಿದ್ದರೆ, ನಾಳೆ ಹೋಗಿ ಬಾ ಅನ್ನುತ್ತಿದ್ದೆ. ಅಥವಾ ಎರಡು ಬಯ್ಯುತ್ತಿದ್ದೆ. ಅಷ್ಟೇ ತಾನೇ ? ಅಷ್ಟೊಂದಕ್ಕೆ ಹೆದರಿ ಸುಳ್ಳು ಯಾಕೆ ಹೇಳಲಿಕ್ಕೆ ಶುರು ಮಾಡಿದಿ ? ಒಂದು ಸುಳ್ಳನ್ನು ಮುಚ್ಚಿಟ್ಟುಕೊಳ್ಳಲಿಕ್ಕೆ ಸುಳ್ಳಿನ ಮೇಲೆ

ಸುಳ್ಳು ಹೇಳಬೇಕಾಗಿ ಬರುತ್ತೆ, ಹೌದಾ ? ಈ ಸಂಗತಿ ಈಗ ನಿನಗೆ ಗೊತ್ತಾಗಿದ್ದೀತು. ಅಲ್ಲವೇನೋ ಪೆಂಗಾ ? " ಎಂದರು.

ಗೋವಿಂದನು ನಾಚಿ ಮುದುಡಿ ಏನೋ ಗೊಣಗುತ್ತ ತಲೆಬಗ್ಗಿಸಿ ನಿಂತನು:

"ಇವತ್ತು ಸಾಯಂಕಾಲ ಆ ಜಮೀನ್ದಾರರೇ ನಗರದಲ್ಲಿ ನನಗೆ ಸಿಕ್ಕಿದರು. ಮುಹೂರ್ತದ ಬದಲಾವಣೆಯನ್ನು ನಾನೇ ಅವರೊಂದಿಗೆ ಹೇಳಿಬಿಟ್ಟೆನು. ಅವರು ಮನೆಯಲ್ಲೇ ಇದ್ದರೆಂದು ಸುಳ್ಳು ಹೇಳಿದಿ. ದಾರಿಯಲ್ಲಿ ನದಿಗೆ ನೆರೆ ಬಂತೆಂದರೆ ನಿಜವೇ ಅಂದುಕೊಂಡು ಮತ್ತೊಂದು ಸುಳ್ಳು ಹೇಳಿದಿ. ಆ ನದಿ ಪೂರ್ತಿ ಬತ್ತಿ ಹೋಗಿರುವ ಸಂಗತಿ ಯಾವುದೂ ನಿನಗೆ ಗೊತ್ತೇಇಲ್ಲ. ಹೌದಾ ? " ಎಂದು ಕೇಳಿದರು ಜಮೀನುದಾರರು.

"ಗೊತ್ತಿರಲಿಲ್ಲ ಅಯ್ಯಾ, ನಾನು ಆ ಕಡೆಗೆ ಹೋಗಿ ಬಹಳ ದಿನಗಳಾದವು" ಎಂದು ಗೋವಿಂದನು ಅಳುಗೊರಲಿನಿಂದ ಹೇಳಿದನು.

ಜಮೀನ್ದಾರರು ಗಟ್ಟಿಯಾಗಿ ನಕ್ಕು, "ಆ ಜಮೀನ್ದಾರರ ಮಗ ಇನ್ನೂ ಸೋದರ ಮಾವನ ಮನೆಯಲ್ಲೇ ಇದ್ದಾನೆ. ಅದೂ ನಿನ್ನದು ದೊಡ್ಡ ಸುಳ್ಳು. ಅವರ ಮನೆಯ ಚಾವಡಿ ಹತ್ತಿರ ಮಾವಿನ ಮರವೆಲ್ಲಿದೆ ? ಅದು ಗಾಳಿಗೆ ಬಿದ್ದು ಆರು ತಿಂಗಳಾಯಿತು. ಬೇವಿನ ಮರವೊಂದಿದೆ ಅಷ್ಟೇ. ಹೀಗೆಯೇ ಕಪ್ಪು ದನಕ್ಕೆ ರೋಗ ಬಂದ ವಿಷಯ ಕೂಡಾ ನಾನು ಸುಮ್ಮನೇ ಕೇಳಿದ್ದು. ಅವರ ಮನೆಯಲ್ಲಿ ಯಾವ ಬಣ್ಣಗಳ ದನಗಳಿವೆಯೋ ನನಗೇ ಗೊತ್ತಿಲ್ಲ" ಎಂದು ಮತ್ತೂ ಒಂದಿಷ್ಟು ನಕ್ಕರು.

ಗೋವಿಂದನು ಬಗ್ಗಿದ ತಲೆ ಎತ್ತಲಿಲ್ಲ.

ಜಮೀನ್ದಾರರು ಕುರ್ಚಿಯಿಂದ ಏಳುತ್ತಾ, "ಸರಿ ಹೋಗು, ಇನ್ನೆಂದಿಗೂ ಹೀಗೆ ಸುಳ್ಳು ಮಾತ್ರ ಹೇಳಬೇಡ. ನೀನು ಅಲ್ಲಿಗೆ ಯಾಕೆ ಹೋಗಲಿಲ್ಲವೋ ನನಗೆ ಮುಖ್ಯವಲ್ಲ, ಸುಳ್ಳು ಹೇಳಿದರೆ ಇಂದಲ್ಲದಿದ್ದರೆ ನಾಳೆ ಹೊರಬೀಳುತ್ತದೆಂಬುದನ್ನು ಮಾತ್ರ ಮರೆಯಬೇಡ" ಎಂದರು.

"ಕ್ಷಮಿಸಿರಿ ಅಯ್ಯಾ, ಇಲ್ಲಿ ಕೆಲಸಗಳು ಮುಗಿಯುವಾಗ ತಡವಾಗಿ ಹೋಯಿತು. ನಾಳೆ ಹೋಗಿ ಹೇಳಬೇಕೆಂದುಕೊಂಡೆನು. ನಿಮಗೆ ಸಿಟ್ಟು ಬರುವುದೇನೋ ಅಂದುಕೊಂಡು ಸುಳ್ಳು ಹೇಳಿದೆ. ಇನ್ನೆಂದಿಗೂ ಹೀಗೆ ಹೇಳಲಾರೆ ಅಯ್ಯಾ" ಎಂದನು.

"ಸರಿಸರಿ, ಮೊದಲು ಒಳಗೆ ಹೋಗಿ ಈ ಪೊಟ್ಟಣ ಅಮ್ಮಾವರಿಗೆ ಕೊಟ್ಟು, ನೀನೂ ಇಷ್ಟು ತಿನ್ನು" ಎಂದು ಹೇಳಿ ತಾವು ನಗರದಿಂದ ತಂದ ತಿಂಡಿಯ ಪೊಟ್ಟಣವನ್ನು ಅವನ ಕೈಗೆ ಕೊಟ್ಟು ಕಳುಹಿಸಿದರು.






## ೧೧

[ತಾಯಿಯ ಮೂಲಕವಾಗಿ ಪಿಂಗಳನಿಗೆ ಅಣ್ಣಂದಿರು ಆವಳನ್ನು ಹೇಗೆ ಹಿಂಸೆ ಪಡಿಸಿದರೆಂಬುದು ತಿಳಿಯಿತು. ಆದರೆ ಅಣ್ಣಂದಿರು ಪಶ್ಚಾತ್ತಾಪದಿಂದ ರೋದಿಸಿಕೊಂಡು ಬಂದುದನ್ನು ನೋಡಿ, ಪಿಂಗಳನ ಮನಸ್ಸು ದ್ರವಿಸಿ, ಸೋದರ ಪ್ರೇಮದಿಂದ ಆವರನ್ನು ಆದರಿಸಿದನು. ಅವರಿಬ್ಬರೂ ಪಿಂಗಳನು ತಂದ ಸೊತ್ತುಗಳಿಗಾಗಿ, ಪಿಂಗಳನನ್ನು ಒಬ್ಬ ಹಡಗಿನ ಸರಂಗನಿಗೆ ಗುಲಾಮನಾಗಿ ಮಾರಲು, ಆ ಸರಂಗನ ಬಳಿಗೆ ಹೋಗಿ ಮಾತಾಡಿದರು.]

**ಜೀ**ವದತ್ತನು ಸಣ್ಣತಮ್ಮನಾದ ಪಿಂಗಳನೊಬ್ಬ ಪ್ರಚಂಡ ಪುಂಡನೆಂಬಂತೆ ಹೇಳಿದ ವಿವರಗಳನ್ನೆಲ್ಲಾ ಹಡಗಿನ ಸರಂಗನು ಶ್ರದ್ಧೆಯಿಟ್ಟು ಗೋಣಾಡಿಸುತ್ತಾ ಕೇಳಿ, ಎರಡು ಕೈಗಳನ್ನೂ ಮುಂದೆ ಚಾಚಿ ವಿಕಟವಾಗಿ ನಕ್ಕನು. ಆ ನಗುವಿನ ಅಂತರಾರ್ಥವೇನೆಂದು ಜೀವದತ್ತ, ಲಕ್ಷದತ್ತರಿಗೆ ಅರ್ಥವಾಗದೆ, ಮುಖ ಮುಖ ನೋಡಿಕೊಂಡರು. ಅವರಿಬ್ಬರ ಮುಖಗಳಲ್ಲಿ ಕಳವಳದ ಕಪ್ಪು ಹರಡಿತು.

ನಕ್ಕು ತೀರಿಸಿದ ಮೇಲೆ ಹಡಗಿನ ಸರಂಗನು ಸ್ವಲ್ಪಹೊತ್ತು ಆಲೋಚನೆ ಮಾಡುತ್ತಾ ಸುಮ್ಮ ನಿದ್ದು, ಆಮೇಲೆ ಜೀವದತ್ತನ ಕಣ್ಣುಗಳನ್ನು ಚುಚ್ಚುವಂತೆ ನೋಡುತ್ತಾ, "ಭೇಷ್ ಭೇಷ್! ನಮಗೆ ಬೇಕಾದಂಥ ಮನುಷ್ಯನ ವರ್ಣನೆಯನ್ನೇ ಮಾಡಿರುವಿ. ಆದರೆ ನೀನು ಹೇಳುವುದೆಲ್ಲಾ ನಿಜವೇ ಏನು? ನಿಜವಾಗಿಯೂ ಪಿಂಗಳನೆಂಬ ನಿಮ್ಮ ಆ ತಮ್ಮನು ನಿಮ್ಮನ್ನೂ, ತಾಯಿಯನ್ನೂ ಅಷ್ಟರಮಟ್ಟಿಗೆ ಹಿಂಸಿಸುವನೇ? ನನ್ನ ಮುಂದೆ ಸುಳ್ಳು ಜೊಳ್ಳು ಕಾಡು ಹರಟೆಗಳು ಉಪಯೋಗ ವಿಲ್ಲ. ಮಾತಿನ ಪ್ರತಿ ಅಕ್ಷರವೂ ಸತ್ಯವಾಗಿರ ಬೇಕು" ಎಂದನು.



"ಅಯ್ಯಾ, ನಿಮ್ಮ ಪುಣ್ಯ! ಹಾಗೆ ಮಾತ್ರ ಮಾಡಬೇಡಿ. ಅವನು ತಿರುಗಿ ಮನೆಗೆ ಬಂದರೆ ಮತ್ತೆ ನಮ್ಮ ಗತಿ ಅಷ್ಟೇ!" ಎಂದು ಅದುರಿ ಬೀಳುತ್ತ ಜೀವದತ್ತನು ಹೇಳಿದನು. ಕೂಡಲೇ ಲಕ್ಷದತ್ತನು, "ಹುಟ್ಟಾ ದುಷ್ಟಬುದ್ಧಿಯವನು. ಅಂಥವನನ್ನು ನೀವು ಎರಡು ಮೂರು ವರ್ಷದಲ್ಲಿ ಹಿಂದಿರುಗಿ ಮನೆಗೆ ಕಳುಹಿಸಿಬಿಟ್ಟರೆ, ಮೊದಲಿನ ಬುದ್ಧಿ ಮರುಕಳಿಸಿ, ನಮ್ಮ ಮತ್ತು ತಾಯಿಯ ಜೀವ ತೆಗೆಯುತ್ತಾನೆ. ನಿಮ್ಮಂಥ ದೂರ ದೂರ ಇರುವವರೇ ಅವನ ಬುದ್ಧಿಗೆ ಸರಿಯಾದವರು. ನಮ್ಮ ಮೇಲೆ ಅವನಿಗಿರುವ ಹಗೆ ನಾಗರಹಾವಿನ ಹಗೆಯೇ!" ಎಂದನು.

"ಹಾಗಾದರೆ ಅವನನ್ನು ನಮಗೆ ಗುಲಾಮನಾಗಿ ಮಾರಲು ನೀವು ಮಾತ್ರವಲ್ಲದೆ, ನಿಮ್ಮ ತಾಯಿಯ ಒಪ್ಪಿಗೆಯೂ ಬೇಕು. ಆಕೆ ಒಪ್ಪುತ್ತಾಳೆಯೇ? ಆಮೇಲೆ ರಾಜನ ಬಳಿಗೆ ಹೋಗಿ ನಮ್ಮ ಮೇಲೆ ವ್ಯಾಜ್ಯ ತಂದರೆ ನಾವು ಪೇಚಾಡಬೇಕಾದೀತು. ನಿಮ್ಮ ತಾಯಿಗೂ ಅವನು ಬೇಡವೇ? ಆಲೋಚಿಸಿ ಹೇಳಿರಿ" ಎಂದನು ಸರಂಗ.

ಜೀವದತ್ತ ಲಕ್ಷದತ್ತರು ಸ್ವಲ್ಪದೂರ ಹೋಗಿ, ಏನೋ ರಹಸ್ಯ ಮಾತಾಡಿಕೊಂಡಂತೆ ನಟಿಸಿ, ಆಮೇಲೆ ಸರಂಗನ ಬಳಿಗೆ ಬಂದು ವಿನಯತುಂಬಿ ಸೂಸುವ ಹಾಗೆ ಭಾವನೆ ಮಾಡಿಕೊಂಡು ಹೀಗೆಂದರು:

"ಅಯ್ಯಾ, ಸರಂಗ ಸಾಹೇಬರೇ! ಎಲ್ಲಾ ಸಮಾಚಾರವನ್ನೂ ನಮ್ಮ ತಾಯಿಯೊಂದಿಗೆ ಮಾತಾಡಿಯೇ ಬಂದಿದ್ದೇವೆ. ಅವಳ ಉದ್ದೇಶ ಕೂಡಾ ಯಾವುದೋ ಒಂದು ಕಾರಣದಿಂದ ಅವನನ್ನು ಮನೆಯಿಂದ ಹೊರಗೆ ಹಾಕಬೇಕೆಂತಲೇ ಇದೆ. ಎಷ್ಟೇ ಹೊಟ್ಟೆಯ ಮಗನಾದರೂ, ಅವನ ಪುಂಡ ಕಾಟಗಳನ್ನು ಸಹಿಸುವ ಶಕ್ತಿ ಇನ್ನು

"ನಿಜ, ಸರಂಗ ಸಾಹೇಬರೇ! ನಿಜ! ನಮ್ಮ ಮಾತು ಪ್ರತಿ ಅಕ್ಷರವೂ ನಿಜ. ಸಾಸಿವೆಯಂಥ ಸುಳ್ಳೂ ಅದರಲ್ಲಿಲ್ಲ. ಇಷ್ಟು ಕಾಲದಿಂದ ಮಹಾ ದುಷ್ಟನಾದ ಆ ತಮ್ಮನ ಕಾಟವನ್ನು ತಾಳಿ ತಾಳಿ ಸಾಕಾಯಿತು. ಇನ್ನು ತಾಳುವಂತಿಲ್ಲ. ಅವನಿಂದ ನಮಗಾಗುವ ಕಷ್ಟ ಪರಮಾತ್ಮನಿಗೇ ಗೊತ್ತು" ಎಂದನು ಲಕ್ಷದತ್ತ.

ಹಡಗಿನ ಸರಂಗನು ಮತ್ತೊಮ್ಮೆ ಅವರ ಕಣ್ಣು ಗಳನ್ನು ಚುಚ್ಚಿ ನೋಡಿ, "ಹಾಗಿದ್ದರೆ ನಿಮ್ಮ ತಮ್ಮನನ್ನು ಕೊಂಡುಕೊಳ್ಳಲು ನನಗೇನೂ ಅಭ್ಯಂತರ ವಿಲ್ಲ. ಅವನನ್ನು ನನ್ನ ಹಡಗಿನಲ್ಲಿ ಕಲಾಸಿಯಾಗಿ ಇಟ್ಟುಕೊಂಡು, ಅವನ ಗರ್ವ ಮುರಿಯುವಂತೆ ದುಡಿಸುತ್ತೇನೆ. ಎಲ್ಲರ ಹಾಗೆ ದಾರಿಗೆ ಬಂದ ಕೂಡಲೇ ಮತ್ತೆ ನಿಮ್ಮ ಮನೆಗೆ ಕಳುಹಿಸುತ್ತೇನೆ. ಯಾರನ್ನೂ ಗುಲಾಮರಾಗಿ ದುಡಿಸುವ ಕ್ರೂರ ನಾನಲ್ಲ. ಆಗಬಹುದಷ್ಟೆ?" ಎಂದನು.

ಅವಳಲ್ಲಿಲ್ಲ. ಹಾಗಂತ ಪಾಪ, ಅವಳಾಗಿ ತನ್ನ ಬಾಯಿಯಿಂದ ಅವನನ್ನು ಗುಲಾಮನಾಗಿ ತೆಗೆದು ಕೊಂಡು ಹೋಗಿರೆಂದು ಹೇಳಲಾರಳು. ಅದಕ್ಕೇ ನಾವಿಬ್ಬರೇ ಬಂದದ್ದು. ಅದರಿಂದ ನಿಮಗೆ ಯಾವ ತೊಂದರೆಯೂ ಬಾರದು. ನಮ್ಮ ಮಾತನ್ನು ನಂಬಿರಿ ಸಾಹೇಬರೇ !"

"ಹಾಗಾದರೆ ಸರಿ. ಅವನನ್ನು ಈ ದಿನ ಸಾಯಂಕಾಲ ಸೂರ್ಯನು ಮುಳುಗಿದ ಮೇಲೆ ಯಾವುದೋ ಕಾರಣ ಹೇಳಿ ಇಲ್ಲಿಗೆ ಕರೆದುಕೊಂಡು ಬಂದುಬಿಡಿ. ಆಮೇಲಿನ ಕೆಲಸ ನಾನು ನೋಡಿ ಕೊಳ್ಳುತ್ತೇನೆ. ತೆಗೆದುಕೊಳ್ಳಿರಿ, ಅವನಿಗೆ ನಾನು ಕೊಡಲಿರುವ ಬೆಲೆ" ಎಂದು ಹೇಳಿ ಸರಂಗನು ಹಣದ ಚೀಲವನ್ನು ಬಿಚ್ಚಿ ನೂರು ಮೊಹರಿ ಗಳನ್ನು ಜೀವದತ್ತನಿಗೆ ಕೊಡಲು ನೋಡಿದನು.



ಜೀವದತ್ತನು ಕೈಚಾಚುವುದನ್ನು ಬಿಟ್ಟು, "ಅಯ್ಯಾ, ಅವನನ್ನು ನಾವು ಸಮುದ್ರ ತೀರಕ್ಕೆ ಕರಕೊಂಡು ಬರುವುದು ಆಗುವ ಮಾತಲ್ಲ. ಅವನಲ್ಲಿ ನೂರು ನರಿಗಳಿಗಿರುವ ತಂತ್ರಶಕ್ತಿಯೂ, ಎಂಬತ್ತು ಕಾಡುಕೋಣಗಳ ಬಲವೂ ಇವೆ. ಆದ್ದರಿಂದ ನೀವೇ ಈ ದಿನ ರಾತ್ರಿ ಬಂದು ಹೇಗಾದರೂ ಉಪಾಯ ಮಾಡಿ ಅವನನ್ನು ನಿಮ್ಮ ಕೈಗೆ ಸಿಕ್ಕಿಸಿಕೊಳ್ಳಬೇಕು" ಎಂದನು.

ಜೀವದತ್ತ, ಲಕ್ಷದತ್ತರ ಭಯವನ್ನು ನೋಡಿ ಸರಂಗನು ದೊಡ್ಡ ದನಿಯಿಂದ ನಕ್ಕನು. "ಅವನ ನರಿತಂತ್ರಗಳೂ, ಎಂಬತ್ತು ಕಾಡುಕೋಣಗಳ ಶಕ್ತಿಯೂ ನನ್ನ ಹತ್ತಿರ ಉಪ್ಪಿನ ಹರಳಿಗೂ ಸರಿಬಾರದು. ಕಡೆಗೆ ರಾಕ್ಷಸನಾದರೂ, ನನ್ನ ಕಣ್ಣಿಗೆ ಬಿದ್ದರೆ ಸಾಕು, ಅವನ ಕಾಲಿಗೂ ಕೊರಳಿಗೂ ಕಬ್ಬಿಣದ ಸಂಕಲೆ ತಗಲಿಸಿ, ನನ್ನ ಹಡಗಿನಲ್ಲಿ ಕಲಾಸಿ ಕೆಲಸಮಾಡಿಸಿ ಬಿಡುತ್ತೇನೆ. ಅದಿರಲಿ, ಈ ದಿನ ರಾತ್ರಿ ಜತೆಗೆ ಇಬ್ಬರು ಕಲಾಸಿಗಳನ್ನು ಕರೆದು ಕೊಂಡು ನಿಮ್ಮ ಮನೆಗೆ ಬರುತ್ತೇನೆ. ನೀವಿಬ್ಬರೂ ಸರ್ವ ಸಿದ್ಧತೆಯಿಂದ ಇರಬೇಕು, ನೋಡುತ್ತೇನೆ ನಿಮ್ಮ ತಮ್ಮನನ್ನು" ಎಂದನು.

"ನಿಮಗೆ ನಮ್ಮ ಸಾವಿರ ನಮಸ್ಕಾರಗಳು ಅಯ್ಯಾ ! ನಿಮ್ಮ ಈ ಸಹಾಯಕ್ಕೆ ಇಡೀ ಜನ್ಮ ಕೃತಜ್ಞರಾಗಿರುತ್ತೇವೆ" ಎಂದು ಜೀವದತ್ತ, ಲಕ್ಷ ದತ್ತರು ಹಡಗಿನ ಸರಂಗನು ಕೊಟ್ಟ ನೂರು ಮೊಹರಿಗಳನ್ನು ತೆಗೆದುಕೊಂಡು ಹಿಡಿಸಲಾಗದಷ್ಟು ಆನಂದದಿಂದ ಮನೆಯ ದಾರಿ ಹಿಡಿದರು.

ದಾರಿಯಲ್ಲಿ ಲಕ್ಷದತ್ತನು "ಅಲ್ಲಣ್ಣಾ, ಈಗ ನಾವು ಪಿಂಗಳನಿಗೆ ಅನುಮಾನ ಬಾರದ ಹಾಗೆ ಯಾವುದೋ ಒಂದು ಉಪಾಯ ಮಾಡಬೇಕಾಗಿದೆ. ಸರಂಗನು ಒಬ್ಬನೇ ಅಲ್ಲದೆ, ಮತ್ತಿಬ್ಬರು ಕಲಾಸಿ ಗಳನ್ನೂ ನಮ್ಮ ಮನೆಗೆ ಕರೆದುಕೊಂಡು ಬಂದು ದನ್ನು ನೋಡಿ ಪಿಂಗಳನಿಗೆ ಅನುಮಾನ ಬಂದರೆ ಏನು ಮಾಡುವುದು ?" ಎಂದನು.

"ಛೀ ಬಿಡು. ಅಂಥಾ ಭಯವೇನಿಲ್ಲ. ಅದಕ್ಕೆ ತಕ್ಕಹಾಗಿನ ಉಪಾಯ ಮೊದಲೇ ಆಲೋಚಿಸಿದ್ದೇನೆ," ಎಂದು ಜೀವದತ್ತನು ನಿಂತು, ಒಂದುಸಾರಿ ಸುತ್ತಲೂ ನೋಡಿ, ಲಕ್ಷದತ್ತನ ಕಿವಿಯಲ್ಲಿ ಪಿಸಪಿಸನೆ ಏನೋ ಗುಟ್ಟಾಗಿ ಹೇಳಿದನು.

ಅದನ್ನು ಕೇಳಿ ಲಕ್ಷದತ್ತನು ದೊಡ್ಡ ದನಿಯಿಂದ ನಗುತ್ತ, ಹಾರುತ್ತ, "ಅಣ್ಣಾ, ನೀನು ಬುದ್ಧಿಯಲ್ಲಿ ಬೃಹಸ್ಪತಿಯನ್ನೇ ಮಿಂಚಿದವನು. ನನಗೆ ಗೊತ್ತು! ಕಡೆಗೆ ಅಣ್ಣಾ, ಪಿಂಗಳನು ತಂದ ಹಣವೆಲ್ಲಾ ನಮ್ಮದಾದಾಗ, ನನ್ನ ಭಾಗದಲ್ಲಿ ನನಗೇನೂ ಕಡಿಮೆ ಮಾಡಲಾರೆಯಷ್ಟೆ?" ಎಂದು ಕೇಳಿದನು.

"ಛೇ ಛೆ! ನಿನಗೇಕೆ ಅಂಥ ಸಂದೇಹ ಬಂತು? ಉಪಾಯ ನಾನು ಹೇಳಿದೆನೆಂದು, ಹೆಚ್ಚಿನಂಶ ಇಟ್ಟುಕೊಳ್ಳುವೆನೆಂದು ಮಾಡಿದಿಯಾ? ಅದರಲ್ಲಿ ನಾನು ಹೆಚ್ಚಿನವನಾದರೆ ಬಲದಲ್ಲಿ ನೀನೇ ಹೆಚ್ಚಿನವನಲ್ಲೇನೋ? ಅಲ್ಲದೆ ಜತೆ ಸೋದರನಾದ ನಿನಗೆ ಮೋಸ ಮಾಡುವೆನೇ? ಭ್ರಾತೃವಂಚನೆ ನಮ್ಮ ವಂಶದಲ್ಲೇ ಇಲ್ಲ!" ಎಂದನು ಜೀವದತ್ತ. ಹೀಗೆ ಅಣ್ಣ ತಮ್ಮಂದಿರು ನಗುತ್ತ ಹುಚ್ಚುಚ್ಚಾಗಿ ಹಾಡುತ್ತ ಮನೆಯ ಹತ್ತಿರ ಬಂದರು. ಕೂಡಲೇ ಅವರ ಭಾವಗಳು ಮಾರ್ಪಟ್ಟುವು. ಬಾಗಿಲಲ್ಲಿ ಪಿಂಗಳನನ್ನು ನೋಡಿದ ಕೂಡಲೇ ಮುಖಗಳಲ್ಲಿ ಎಲ್ಲಿಲ್ಲದ ಚಿಂತೆಯನ್ನು ತಂದುಕೊಂಡು, ಬಾಡಿ ಕಳೆಗೆಟ್ಟವರ ಹಾಗೆ ಆದರು.

ಪಿಂಗಳನು ಅವರನ್ನು ನೋಡಿ, "ಇದೇನು ಅಣ್ಣಗಳಿರಾ! ಏನೋ ಬಹಳ ದುಃಖದಲ್ಲಿರುವ ಹಾಗಿದೆ? ಏನಾಯಿತು?" ಎಂದು ಕೇಳಿದನು.

ಜೀವದತ್ತನು ಬಿಕ್ಕುವ ಕೊರಳಿನಿಂದ "ಮತ್ತೇನೂ ಇಲ್ಲ ತಮ್ಮಾ, ಮಾನವರಿಗೆ ಅವಮಾನಕ್ಕಿಂತ ಹೆಚ್ಚಿನ ಚಿಂತೆ ಇಲ್ಲವಷ್ಟೆ? ಈ ದಿನ ದಾರಿಯಲ್ಲಿ ಬರುವಾಗ ನಮ್ಮ ಹಳೇ ಸ್ನೇಹಿತನೊಬ್ಬ ಸಿಕ್ಕಿದ. ಅವನು ಈಗ ಹಡಗಿನಲ್ಲಿ ಸರಂಗನಾಗಿದ್ದಾನೆ. ವ್ಯಾಪಾರ ಮಾಡಿಕೊಂಡು ಈ ಪಟ್ಟಣದಲ್ಲಿ ಏನೋ ವ್ಯಾಪಾರದ ಮೇಲೆ ಬಂದಿದ್ದಾ



ನನ್ನು. ಮೊದಲು ಅಥನು ನಮ್ಮಿಬ್ಬರಿಗೂ ಅನೇಕ ಬಾರಿ ಆತಿಥ್ಯವಿತ್ತು ಗೌರವಿಸಿದ್ದಾನೆ. ಈವರೆಗೂ ಅವನನ್ನು ನಾವು ಹಾಗೆ ಗೌರವಿಸಲೇ ಇಲ್ಲ. ನಮಗೇನಿದೆ? ಹುಟ್ಟು ದರಿದ್ರರು!" ಎಂದು ದಳದಳ ಕಣ್ಣೀರಿಳಿಸಿದನು. ಲಕ್ಷದತ್ತನ ಕಣ್ಣುಗಳೂ ಕರಗಿ ಸುರಿದುವು.

"ಅಣ್ಣಾ, ನಿಮ್ಮ ಸ್ನೇಹಿತನು ನನ್ನ ಸ್ನೇಹಿತನೂ ಅಲ್ಲವೇನು? ನಾವು ಈಗ ದರಿದ್ರರೇನೂ ಅಲ್ಲ. ಬೇಕಾದರೆ ಅವಂತಿ ನಗರದಲ್ಲಿರುವ ಪ್ರತಿಯೊಬ್ಬರಿಗೂ ನಾವು ದಿನಾ ಸಂತರ್ಪಣೆ ಮಾಡಲು ಸಾಧ್ಯವಿದೆ. ನಿಮ್ಮ ಸ್ನೇಹಿತನಾದ ಹಡಗಿನ ಸರಂಗನನ್ನು ಅನುಚರರೊಂದಿಗೆ ಸಹಾ ಈ ದಿನ ರಾತ್ರಿ ನಮ್ಮಲ್ಲಿ ಔತಣಕೊಟ್ಟು ಉಪಚರಿಸೋಣ. ಆಹ್ವಾನಿಸಿ ಬಂದುಬಿಡಿರಿ. ನಮ್ಮ ಮನೆಯ ವಠಾರದೊಳಗೇ ಅವರೆಲ್ಲ ಮೆಚ್ಚಿ ಬೆರಗಾಗುವ ಹಾಗೆ, ಎಲ್ಲಾ ಏರ್ಪಾಡೂ ಮಾಡೋಣ" ಎಂದನು ಪಿಂಗಳ.

"ನಿಜಕ್ಕೂ ಹೇಳುವೆಯಾ ತಮ್ಮಾ?" ಎಂದು ಜೀವದತ್ತ ಲಕ್ಷದತ್ತರಿಬ್ಬರೂ ಅತ್ಯಂತ ಸಂತೋಷ ಸಂಭ್ರಮಗಳನ್ನು ನಟಿಸುತ್ತ ಕೇಳಿದರು.

"ಹೌದು, ಅಣ್ಣಂದಿರಾ! ತಪ್ಪದೆ ನಿಮ್ಮ ಸ್ನೇಹಿತನನ್ನು ಕರೆದುಕೊಂಡು ಬನ್ನಿ. ಅತ್ಯುತ್ತಮವಾದ ಔತಣದ ಏರ್ಪಾಡು ಮಾಡೋಣ" ಎಂದನು ಪಿಂಗಳ.

"ಸರಿ. ಹಾಗಾದರೆ ಈಗಲೇ ಹೋಗಿ ಅವನೊಂದಿಗೆ ಹೇಳಿ ಬರುತ್ತೇವೆ." ಎಂದು ಜೀವದತ್ತ, ಲಕ್ಷದತ್ತರು ಮನೆಯಿಂದ ಹೊರಗೆ ಹೋದರು.

ಅವರಿಬ್ಬರೂ ಹೊತ್ತು ಮುಳುಗುವವರೆಗೂ ಜೂಜಿನ ಮನೆಯಲ್ಲಿಯೂ, ಪಾನಶಾಲೆಗಳಲ್ಲಿಯೂ ಉತ್ಸಾಹದಿಂದ ಕಾಲಹರಣ ಮಾಡಿ, ಕತ್ತಲೆಯಾದ ಮೇಲೆ ಸರಂಗನ ಬಿಡದಿಗೆ ಹೋದರು. ಅವರ ಕರೆಯನ್ನು ಕೇಳಿ ಸರಂಗನು ಬಹಳ ಸಂತೋಷದಿಂದ, ಬಲಶಾಲಿಗಳಾದ ಇಬ್ಬರು ಕಲಾಸಿಗಳನ್ನು ಜತೆಯಲ್ಲಿ ಕರೆದುಕೊಂಡು, ಅಣ್ಣ ತಮ್ಮಂದಿರ ಹಿಂದೆ ಅವರ ಮನೆಗೆ ಹೊರಟನು.






ಆ ಹಡಗಿನ ಸರಂಗನಿಗೂ, ಅವನ ಅನುಚರರಿಗೂ ಪಿಂಗಳನು ಹೃದಯಪೂರ್ವಕವಾಗಿ ಸ್ವಾಗತ ಹೇಳಿದನು. ಅವರೆಲ್ಲರೂ ಒಂದು ಕೋಣೆಯಲ್ಲಿ ಸುಖಾಸೀನರಾದ ಮೇಲೆ, ಪಿಂಗಳನೂ ಅವನ ತಾಯಿಯೂ ಒಳಗೋಣೆಗೆ ಹೋಗಿ ಮಹಿಮೆಯ ಚೀಲದೊಳಗಿನಿಂದ ಬೇಕು ಬೇಕಾದ ಪದಾರ್ಥಗಳನ್ನೂ, ಪಾನೀಯಗಳನ್ನೂ ತೆಗೆತೆಗೆದು ಅಣಿಗೊಳಿಸಿಟ್ಟು, ಅವರೆಲ್ಲರಿಗೂ ಬಡಿಸಿದರು. ಸರಂಗನಿಗೆ ಚೀಲದ ಮಹತ್ವವೇನೊಂದೂ ತಿಳಿಯದು. ಜೀವದತ್ತ, ಲಕ್ಷದತ್ತರೇ ತನಗೆ ಇಂತಹ ಮರ್ಯಾದೆ ತೋರಿಸುತ್ತಾರೆಂದೇ ನಂಬಿದನು.

ಭೋಜನವಾದ ಮೇಲೆ ರಾತ್ರಿ ಬಹಳ ಹೊತ್ತು ಹೋಗುವವರೆಗೂ ಎಲ್ಲರೂ ಕುಶಾಲಾಗಿ ಹರಟೆ ಹೊಡೆಯುತ್ತ ಕಾಲಹರಣ ಮಾಡಿಕೊಂಡಿದ್ದರು, ಪಿಂಗಳನು ನಿದ್ದೆಯ ಮತ್ತಿಗೆ ಬೀಳದೆ ಏನೇನೋ ಹರಟಿಕೊಂಡಿದ್ದನು. ಥಕ್ಕನೆ ಅವನ ಮೇಲೆ ಬಿದ್ದು ಹಿಡಿದೊಯ್ಯಬೇಕೆಂದು ಸರಂಗನ ಯೋಚನೆಯಾಗಿತ್ತು. ಅದಕ್ಕಾಗಿ ತಕ್ಕ ಸಮಯ ಕಾಯುತ್ತಿದ್ದನು. ಆದರೆ ಪಿಂಗಳನು ಮೈಮರೆತು ಬೀಳುವ ಲಕ್ಷಣವು ಕಾಣಲೇ ಇಲ್ಲ. ಅವನು ಉತ್ಸಾಹದಿಂದ ಏನೇನೋ ಹೇಳುತ್ತಲೇ ಇದ್ದನು. ಸರಂಗನ ತಾಳ್ಮೆ ಎಲ್ಲೆಯನ್ನು ಮೀರಿತು.

ಇನ್ನು ಕಾಲಹರಣ ಮಾಡುವುದು ಒಳ್ಳೆಯದಲ್ಲವೆಂದುಕೊಂಡು ಸರಂಗನು, ತನ್ನ ಅನುಚರರಿಗೂ, ಜೀವದತ್ತ, ಲಕ್ಷದತ್ತರಿಗೂ ಸಂಜ್ಞೆ ಮಾಡಿದನು. ಕೂಡಲೇ ಅವರೆಲ್ಲ ಒಂದೇಸಾರಿ ಅವನ ಮೇಲೆ ಬಿದ್ದರು. ಅವನ ಕಾಲು ಕೈಗಳನ್ನು ಕದಲಿಸಲಾಗದಂತೆ ಬಿಗಿದು ಕಟ್ಟಿದರು. ಜೀವದತ್ತ, ಲಕ್ಷದತ್ತರು ಅವನು ಕೂಗದಂತೆ ಬಟ್ಟೆಯ ಪಿಂಡಿಯನ್ನು ಅವನ ಬಾಯಿಗೆ ತುರುಕಿದರು.

ಇದನ್ನೆಲ್ಲ ಒಂದಿಷ್ಟೂ ಊಹಿಸದಿದ್ದ ಪಿಂಗಳನು ಮೊದಲು ಆಶ್ಚರ್ಯಪಟ್ಟು, ಆಮೇಲೆ ತನ್ನನ್ನು ಬಂಧಿಸುವವರಿಂದ ಬಿಡಿಸಿಕೊಳ್ಳಲು ಸ್ವಲ್ಪ ಹೆಣಗಾಡಿದನು. ಆದರೆ ತಾನು ಒಬ್ಬನೇ, ತನ್ನನ್ನು ಬಂಧಿಸಲು ನೋಡುವವರು ಐವರು !

ಕೂಡಲೇ ಅವನಿಗೆ ತನ್ನ ಸೇವಕನಾದ ಭಲ್ಲೂಕಕೇತು ನೆನಪಿಗೆ ಬಂದನು. ಎಂತಹ ಕಷ್ಟದಲ್ಲಿ ಸಿಕ್ಕಿಬಿದ್ದಾಗಾದರೂ ಸರಿಯೆ, ಒಂದಾನೊಂದು ಮಂತ್ರವನ್ನು ಉಚ್ಚರಿಸಿಬಿಟ್ಟರೆ, ಮರುಕ್ಷಣದಲ್ಲಿ ತಾನು ಸಹಾಯಕ್ಕೆ ಬರುವೆನೆಂದು ಹೇಳಿದ್ದಾನೆ ! ಅವನು ಹೇಳಿಕೊಟ್ಟ ಮಂತ್ರ ಪಿಂಗಳನ ನೆನಪಿಗೆ ಬಾರದೆ ಹೋಯಿತು.

ಎಷ್ಟೇ ತಲೆಬುರುಡೆ ಕೆದಕಿಕೊಂಡರೂ ಅದು ನೆನಪಾಗಲಿಲ್ಲ. ಅವನು ಈಗ ಪೂರ್ತಿ ಅಸಹಾಯನಾಗಿ ಅಣ್ಣಂದಿರ ತಂತ್ರಕ್ಕೆ ಒಳಗಾಗಿ ಹಡಗಿನ ಸರಂಗನಿಗೆ ಗುಲಾಮನಾಗಿ ಸಿಕ್ಕಿಕೊಂಡು ಬಿಟ್ಟಿದ್ದನು. ಪಕ್ಕದ ಕೋಣೆಯಲ್ಲಿ ನಿದ್ರಿಸಿಕೊಂಡಿದ್ದ ತಾಯಿಗೆ




ಇವು ಯಾವುದೂ ಗೊತ್ತೇ ಆಗಲಿಲ್ಲ. ಪಿಂಗಳನ ಕಾಲು ಕೈಗಳನ್ನು ಕಟ್ಟಿ ಹಾಕಿದ ಮೇಲೆ, ಕಲಾಸಿಗಳಿಬ್ಬರೂ ಅವನನ್ನು ಮರದ ದಿಮ್ಮಿಯ ಹಾಗೆ ಎತ್ತಿ ಹೆಗಲಿನ ಮೇಲೆ ಹಾಕಿಕೊಂಡು, ತಮ್ಮ ಯಜಮಾನನಾದ ಸರಂಗನ ಹಿಂದೆಯೇ ಹೊರಗೆ ನಡೆದು ಹೋದರು.

ಜೀವದತ್ತ, ಲಕ್ಷದತ್ತರು ಕೂಡಾ ಅವರ ಹಿಂದೆಯೇ ಸಮುದ್ರ ತೀರದವರೆಗೂ ಹೋಗಿ, ಹಡಗಿನ ಸರಂಗನೊಂದಿಗೆ, "ಅಯ್ಯಾ! ಜಾಗ್ರತೆ! ಇವನನ್ನು ಬಿಟ್ಟುಗಿಟ್ಟೀರಿ! ಏನು ಮಾಡಿದರೂ ಬಿಡಬೇಡಿ! ಅವನು ವಿಷಸರ್ಪವೆಂದು ಈ ಮೊದಲೇ ಹೇಳಿದ್ದೇವಷ್ಟೆ?" ಎಂದರು.

"ವಿಷಸರ್ಪದ ಬಾಯಿಯನ್ನೇ ಬಿಗಿದಿದ್ದೇವೆ. ಇನ್ನು ಅದರ ಹಲ್ಲುಗಳನ್ನು ಹೇಗೆ ತೆಗೆಯಬೇಕೆಂಬುದೆಲ್ಲ ನನಗೆ ಗೊತ್ತಿದೆ. ನನ್ನ ಹಡಗಿನಲ್ಲಿ ಒಂದುಸಾರಿ ಹುಟ್ಟುಜಲ್ಲೆ ಹಿಡಿದನೆಂದರೆ, ಅದಕ್ಕೆ ಕಬ್ಬಿಣದ ಸಂಕಲೆಯಿಂದ ಅವನನ್ನು ಬಿಗಿದನೆಂದೇ ತಿಳಿಯಿರಿ. ಆಮೇಲೆ ಪರಮೇಶ್ವರನಾದರೂ ಅವನನ್ನು ಅಲ್ಲಿಂದ ಕದಲಿಸಲಾರನು" ಎಂದನು ಸರಂಗ.

ಜೀವದತ್ತ, ಲಕ್ಷದತ್ತರು ಸರಂಗನಿಗೆ ಒಂದಕ್ಕೆ ಎರಡು ಮೂರು ಸಾರಿ ಕೃತಜ್ಞತೆ ಹೇಳಿಕೊಂಡು ಮನೆಗೆ ಹಿಂದಿರುಗಿ ಏನೂ ತಿಳಿಯದವರಂತೆ ಮಲಗಿದರು. ಆಗ ಇನ್ನೂ ಸ್ವಲ್ಪ ರಾತ್ರಿ ಇದ್ದಿತು. ಸ್ವಲ್ಪ ಹೊತ್ತು ನಿದ್ದೆ ಮಾಡಿದವರಂತೆ ನಟಿಸಿ, ಬೆಳಗಾಗುತ್ತಲೇ ತಾಯಿಯ ಬಳಿಗೆ ಹೋಗಿ ಆಕೆಯನ್ನು ಎಬ್ಬಿಸಿ, "ಅಮ್ಮಾ, ಪಿಂಗಳ ಎಲ್ಲಿದ್ದಾನೆ?" ಎಂದು ಕೇಳಿದರು ಸ್ವಲ್ಪ ಗಾಬರಿಯ ದನಿಯಲ್ಲಿ.

ತಾಯಿ ಅವರನ್ನು ಸರಳ ದೃಷ್ಟಿಯಿಂದ ನೋಡಿ, "ಏಕೆ, ಹಾಗೇಕೆ ಗಾಬರಿಯಾಗಿ ಕೇಳುತ್ತೀರಿ? ಇನ್ನೂ ಅವನ ಕೋಣೆಯಲ್ಲಿ ನಿದ್ದೆ ಮಾಡಿಕೊಂಡಿದ್ದಾನು. ಏಳುತ್ತಾನೆ ಸ್ವಲ್ಪ ಹೊತ್ತಿನಲ್ಲಿ" ಎಂದಳು.

"ಅವನ ಕೋಣೆಯಲ್ಲಿ ಇಲ್ಲ. ಮನೆಯಲ್ಲೆಲ್ಲಿಯೂ ಕಾಣುವುದಿಲ್ಲ. ನೀನೇನಾದರೂ ಕೆಲಸ ಹೇಳಿ ಕಳಿಸಿದಿಯೇನೋ ಅಂತ ಕೇಳಿದೆವು" ಎಂದನು ಜೀವದತ್ತ.

ಆ ಮಾತುಕೇಳಿ ತಾಯಿಗೆ ಒಂದು ಬಗೆಯ ಭಯವು ಹಿಡಿಯಿತು. ಅವಳು ಗಡಿಬಿಡಿಯಿಂದ ಮಂಚದಿಂದಿಳಿದು ಅವನನ್ನು ಕರೆಯುತ್ತಾ ಮನೆಯೊಳಗೆಲ್ಲಾ ಓಡಾಡಿದಳು. ಅವಳ ಭಯಗಾಬರಿಗಳನ್ನು ನೋಡಿ ಜೀವದತ್ತನು, "ಅಮ್ಮಾ, ಅಷ್ಟೇನೂ ಹೆದರಬೇಡ. ನನಗೊಂದು ಅನುಮಾನವಾಗುತ್ತಾ ಇದೆ. ರಾತ್ರಿ ನಮ್ಮಲ್ಲಿಗೆ ಬಂದ ಅತಿಥಿಗಳೊಂದಿಗೆ ಮಾತಾಡುವಾಗ ಪಿಂಗಳನು ಹಡಗಿನ ಪ್ರಯಾಣವೆಂದರೆ ತನಗೆ ಬಹಳ ಖುಷಿ ಎಂದು ಹೇಳಿದ್ದುಂಟು. ಬಂದವನು ಹಡಗಿನ ಸರಂಗ ತಾನೇ? ಅವನು ಪಿಂಗಳನನ್ನು ಕರಕೊಂಡು ಹೋದನೋ ಏನೋ?" ಎಂದನು.

"ಹೌದಮ್ಮ. ಹಾಗೇ ಹೋಗಿರಬೇಕು. ಯಾವುದೋ ಒಂದು ದ್ವೀಪದಲ್ಲಿ ದೊಡ್ಡದೊಂದು ಪಾಳು ಬಿದ್ದ ಕೋಟೆಯಿದೆ ಎಂದು ಆ ಸರಂಗ ಹೇಳಿದ್ದಾನೆ. ಅದರ ಬುನಾದಿಯಲ್ಲಿ ದೊಡ್ಡ ದೊಡ್ಡ ಕೊಪ್ಪರಿಗೆಗಳಿವೆಯಂತೆ. ಅಂಥ ನಿಧಿಗಳನ್ನು ಹೊರಗೆ ಎತ್ತಬೇಕಾದರೆ ಅದರ ತಂತ್ರ ಮಂತ್ರಗಳೆಲ್ಲ ತನಗೆ ಗೊತ್ತು ಅಂತ ಪಿಂಗಳ ಹೇಳುತ್ತಿದ್ದ. ಅದಕ್ಕೇ ಹೋದನೇನೋ ! ನಿನ್ನ ಹತ್ತಿರ ಹೇಳಿದರೆ ನೀನು ಹೋಗಬೇಡವೆನ್ನುತ್ತೀ ಅಂತ ಹೇಳಿರಲಿಕ್ಕಿಲ್ಲ" ಎಂದನು ಲಕ್ಷದತ್ತ.

ಮಾಯೆ ಮೋಸಗಳೊಂದೂ ಅರಿಯದ ತಾಯಿಗೆ ಅದರಲ್ಲೇನೋ ಸತ್ಯವಿರುವಂತೆ ತೋರಿತು. ಅವಳು ನಿರಾಶೆಯಿಂದ ಕೈಗಳನ್ನು ಜೋಡಿಸಿ, "ಹೌದು, ಅಪ್ಪಗಳಿರಾ. ಹಾಗೇ ಇದ್ದೀತು. ಪಿಂಗಳನು ಯಾವಾಗಲೂ ಅದೃಷ್ಟವಂತನೇ ! ಅವನ ನ್ಯಾಯ ಬುದ್ಧಿಯೂ, ಒಳ್ಳೆಯ ನಡತೆಯೂ ಅವನನ್ನು ಎಲ್ಲಾ ಆಪತ್ತಿನಿಂದಲೂ ಕಾಪಾಡದಿರವು. ನನ್ನ ಕಂದ ಬೇಗದಲ್ಲೇ ನನ್ನ ಬಳಿಗೆ ಬರುತ್ತಾನೆ !" ಎಂದು ದೇವರ ಪ್ರಾರ್ಥನೆ ಮಾಡಿದಳು.

ತಾಯಿಯ ಪ್ರವರ್ತನೆಗಳು ದುರ್ಬುದ್ಧಿಯ ಅಣ್ಣತಮ್ಮಂದಿರಿಗೆ ಕೋಪವನ್ನುಂಟು ಮಾಡಿತು. ಅವರು ತಾಯಿಯನ್ನು ನೋಡಿ ವಿಕಟವಾಗಿ ನಕ್ಕು "ಓಹೋಹೋ ! ಅವನೊಬ್ಬ ಬುದ್ಧಿವಂತನಾದ ಮಗ ನಿನಗೆ ! ನಾವೆಲ್ಲಾ ಬುದ್ಧಿಗೇಡಿಗಳು ! ದುಷ್ಟರು ಹೌದಾ ? ಮೊದಲಿನಿಂದಲೂ ನೀನು ಅವನ ಮೇಲೆಯೇ ಪಕ್ಷಪಾತ ತೋರಿಸುತ್ತ ಇದ್ದೀಯೇ ! ಇನ್ನೂ ನಾವು ಈ ಮನೆಯಲ್ಲಿ ಒಂದು ಕ್ಷಣವೂ ಇರಲಾರೆವು. ನೀನಾಯಿತು, ನಿನ್ನ ಆ ಕೊಂಡಾಟದ ಮಗನಾಯಿತು. ಅಪ್ಪ ಬಿಟ್ಟು ಹೋದ ಸೊತ್ತು ಎಲ್ಲಿದೆಯೋ ಹೇಳು. ಕೊಡು ನಮಗೆ !" ಎಂದು ಮನೆಯೊಳಗೆ ಹುಡುಕತೊಡಗಿದರು.

ತಾಯಿ ಅವರನ್ನು ತಡೆಯುತ್ತ, "ನಿಮ್ಮ ಅಪ್ಪ ಸಂಪಾದಿಸಿದ ಸೊತ್ತು ಪೂರಾ ನೀವಿಬ್ಬರೂ ಯಾವಾಗಲೋ ಲಗಾಡಿ ತೆಗೆದುಹಾಕಿದಿರಿ. ಈಗ ಇಲ್ಲಿ ಇರುವುದೆಲ್ಲವೂ ಪಿಂಗಳನು ಕಷ್ಟಪಟ್ಟು ಸಂಪಾದಿಸಿದ್ದೇ" ಎಂದಳು.

ಆ ಮಾತು ಕೇಳಿ ಅಣ್ಣತಮ್ಮಂದಿರಿಬ್ಬರೂ ಅತ್ಯುಗ್ರರಾಗಿ, ತಾಯಿಯನ್ನು ಹೀನಾಯವಾಗಿ ಬಾಯಿಗೆ ಬಂದಂತೆ ಬಯ್ಯುತ್ತ, ಮಂತ್ರವೇತ್ತನಾದ ಪದ್ಮಪಾದನಿಂದ ಪಿಂಗಳನು ತಂದಿದ್ದ ಧನವನ್ನೂ, ಮಹಿಮೆಯ ಚೀಲವನ್ನೂ ಹುಡುಕಿ ಹೊರಗೆಳೆದುಕೊಂಡರು. "ಹೀಗೆ ಮಾಡಬೇಡಿರಪ್ಪಾ !" ಎಂದು ಕೂಗಿದಳು ತಾಯಿ. (ಇನ್ನೂ ಇದೆ)






# ಶ್ರಾವಣನ ಕಥೆ

**ಬೇ**ತಾಳದ ಮಿದುಳಿನೊಳಗಿನ ಸುಮಧುರವಾದ ಕಥೆಗಳನ್ನೊಸರುವ ಕಲ್ಲು ಸಕ್ಕರೆಯ ಹರಳು ಒಂದೊಂದನ್ನೇ ಕರಗಿಸುವ ಪಣತೊಟ್ಟವನಂತೆ ರಾಜಾ ತ್ರಿವಿಕ್ರಮನು ಮತ್ತೆ ಮರದ ಬಳಿಗೆ ಹೋಗಿ, ಕೊಂಬೆಯಲ್ಲಿ ನೇತಾಡುವ ಶವವನ್ನು ಕೆಳಗಿಳಿಸಿ ತನ್ನ ಹೆಗಲ ಮೇಲೇರಿಸಿಕೊಂಡು, ಮಾತಾಡದೇ ಸ್ಮಶಾನದ ದಾರಿ ಹಿಡಿದನು. ಆಗ ಶವದೊಳಗಿನ ಬೇತಾಳವು ಮಾತಾಡಲು ತೊಡಗಿ, "ಎಲೈ ರಾಜನೇ, ಇಷ್ಟೊಂದು ರಾತ್ರಿಯ ಹೊತ್ತಿನಲ್ಲಿ ಈ ಭಯಂಕರವಾದ ಸ್ಮಶಾನದ ದಾರಿ ಹಿಡಿದು ನಡೆಯುವ ನಿನ್ನ ಶ್ರಮವೆಲ್ಲಾ ವ್ಯರ್ಥವಾದರೂ ಆಗಬಹುದು. ಹಾಗಾಗಿ ಬಿಟ್ಟರೆ ನೀನು ಯಾರ ಮೇಲೂ ಕೋಪಿಸಿ ಪ್ರಯೋಜನವಾಗದು. ಕಡೆಗೆ ಅದು ತನ್ನ ಸ್ವಯಂ ಕೃತಾಪರಾಧವೆಂದೇ ತಿಳಿಯ ಬೇಕಾದೀತು ! ಶ್ರಾವಣನೆಂಬೊಬ್ಬ ಕವಿಗೆ ಕಡೆಗೆ ಹಾಗೆಯೇ ಆಯಿತು. ಅವನ ಕಥೆಯನ್ನು ಹೇಳುತ್ತೇನೆ, ಕೇಳುತ್ತಾ ದಾರಿ ಸಾಗಿಸು" ಎಂದು ಕಥೆ ಹೇಳಲು ಪ್ರಾರಂಭಿಸಿತು :

ಕಾಂಭೋಜ ದೇಶವನ್ನು ಚಂದ್ರಪಾಲನೆಂಬ ರಾಜನು ಪಾಲಿಸಿಕೊಂಡಿದ್ದನು. ಅವನದು ತುಂಬಾ

## ಬೇತಾಳಕಥೆಗಳು?..



ದಯಾಗುಣವಾಗಿತ್ತು. ಅವನ ಆಸ್ಥಾನದಲ್ಲಿ ಅನೇಕ ಮಂದಿ ಕವಿಗಳೂ, ಪಂಡಿತರೂ ಇದ್ದರು. ದಿನಾ ಸಾಯಂಕಾಲದಲ್ಲಿ ಕವಿತಾ ಗೋಷ್ಠಿ ನಡೆಯುತ್ತಿದ್ದಿತು. ಆ ಗೋಷ್ಠಿಯನ್ನು ನೋಡುತ್ತಾ ಕೇಳುತ್ತಾ ರಾಜನು ತಲೆದೂಗಿ ಆನಂದಿಸುವನು.

ಒಂದುದಿನ ಶ್ರಾವಣನೆಂಬೊಬ್ಬ ಕವಿ ರಾಜನ ಆಶ್ರಯವನ್ನು ಬಯಸಿ ಅಲ್ಲಿಗೆ ಬಂದು, ಚಂದ್ರ ಪಾಲನ ಮೇಲೆ ಒಂದು ಆಶುಕವಿತೆಯನ್ನು ಕಟ್ಟಿ ಹಾಡಿದನು. ಅದನ್ನು ಕೇಳಿ ರಾಜನು ಬಹಳ ಆನಂದಪಟ್ಟು, ಶ್ರಾವಣನಿಗೆ ತನ್ನ ಆಸ್ಥಾನದಲ್ಲಿ ಒಳ್ಳೆಯ ವೇತನದ ಉದ್ಯೋಗವಿತ್ತನು.

ಮರುದಿನದಿಂದ ಶ್ರಾವಣನು ರಾಜನ ಸಭೆಗೆ ಬರತೊಡಗಿದನು. ಸಾಯಂಕಾಲದಲ್ಲಿ ಕವಿಗಳು ತಮ್ಮ ಕಾವ್ಯಗಳನ್ನು ಹಾಡುತ್ತಾ, ವ್ಯಾಖ್ಯಾನಿಸುತ್ತಾ, ತಮ್ಮ ತಮ್ಮೊಳಗೆ ಚರ್ಚೆ ನಡೆಸಿಕೊಂಡಿರಲು, ರಾಜನು ಉತ್ಸಾಹದಿಂದ ಕೇಳುತ್ತಾ ಇರುವನು. ರಾಜನು ಯಾವ ಪ್ರಶ್ನೆಗಳನ್ನೂ ಮಾಡುತ್ತಿರಲಿಲ್ಲ. ಹೊಸತಾಗಿ ಸೇರಿಕೊಂಡ ಶ್ರಾವಣನಿಗೆ, ಅಲ್ಲಿರುವ ಕವಿಗಳ ಕವಿತ್ವದಲ್ಲಿ ಅನೇಕ ಅಸಂದರ್ಭಗಳೂ, ಶಬ್ದ ದೋಷಗಳೂ, ಕಾಣುತ್ತಿದ್ದುವು. ಅವನು ಅಲ್ಲಿಗೆ ಬಂದ ಮೊದಲನೆಯ ದಿನದಲ್ಲಿಯೇ, ಅವರನ್ನು ಖಂಡಿಸಿಯೋ, ದೋಷಗಳನ್ನು ತೋರಿಸಿಯೋ ಕೊಡುವುದು ಚೆನ್ನಾಗಿಲ್ಲವೆಂದುಕೊಂಡು ಶ್ರಾವಣನು ಕೆಲವು ದಿನಗಳವರೆಗೆ ಸಹಿಸಿಕೊಂಡಿದ್ದನು. ಆದರೆ ಬರಬರುತ್ತ ಅವರ ದೋಷ ಪೂರಿತವಾದ ವಿದ್ವತ್ತನ್ನು ನೋಡುತ್ತಿದ್ದ ಹಾಗೆ ಅವನಿಗೆ ಸಹಿಸಿ ಕೊಂಡಿರಲು ಸಾಧ್ಯವಾಗಲಿಲ್ಲ. ಹೇಗೆ ಖಂಡಿಸ ಬೇಕೋ, ಗೊತ್ತಾಗದೆ ತಳಮಳಿಸತೊಡಗಿದನು.

ರಾಜಾ ಚಂದ್ರಪಾಲನು ಅವರ ಕವಿತ್ವಗಳನ್ನೂ, ಚರ್ಚೆಗಳನ್ನೂ, ಕೇಳುತ್ತಾ, ಬಾಯಿ ಮುಚ್ಚಿಕೊಂಡು ಆನಂದಿಸುವುದನ್ನು ನೋಡಿ ಶ್ರಾವಣನಿಗೆ ಆಶ್ಚರ್ಯವಾಗುತ್ತಿತ್ತು. ಅದರೊಂದಿಗೆ ಒಂದು ಅನುಮಾನವೂ ಆಯಿತು. ಒಂದು ವೇಳೆ ದೊಡ್ಡ ಮನಸ್ಸಿನ ಚಂದ್ರ ಪಾಲ ರಾಜನಿಗೆ ಆ ಕವಿಪಂಡಿತರನ್ನು ನಿರಾಶ್ರಿತ ರನ್ನಾಗಿ ಮಾಡಲು ಇಷ್ಟವಿಲ್ಲದೆ, ಅವರ ತಪ್ಪು ಗಳನ್ನು ಸಹಿಸಿಕೊಂಡಿದ್ದಾನೋ ?

ಈ ಅನುಮಾನವನ್ನು ತೀರಿಸಿಕೊಳ್ಳಲು ಶ್ರಾವಣನು ಆ ಕವಿಪಂಡಿತರ ಸ್ಥಿತಿಗತಿಗಳನ್ನು ಕುರಿತು ವಿಚಾರಿಸಿ ತಿಳಿದುಕೊಂಡನು. ಯಾರೋ ಒಬ್ಬಿಬ್ಬರ ಹೊರತು, ಉಳಿದವರೆಲ್ಲ ರಾಜಾಶ್ರಯವಿಲ್ಲದಿದ್ದರೂ ಸುಖವಾಗಿ ಜೀವಿಸುವ ಸ್ಥಿತಿಯಲ್ಲಿರುವವರೇ ಎಂದು ತಿಳಿಯಿತು. ಆಗ ರಾಜನ ತಿಳುವಳಿಕೆಯ ಮೇಲೆಯೂ, ತನ್ನ ಕಾವ್ಯಜ್ಞಾನದ ಮೇಲೆಯೂ ಶ್ರಾವಣನ ಅನುಮಾನ ತಿರುಗಿತು. ಒಂದೋ ಕವಿತೆಗಳ ತಪ್ಪೊಪ್ಪು ಗಳನ್ನು ವಿಮರ್ಶಿಸುವಷ್ಟು ಜ್ಞಾನ ತನಗಿಲ್ಲದಿರಬೇಕು. ಇಲ್ಲವೇ ಚಂದ್ರಪಾಲ ರಾಜನಿಗೆ ಕವಿತ್ವಗಳನ್ನು ಕೇಳಲು ಗೊತ್ತಿದೆಯೇ ಹೊರತು, ಅವುಗಳ ಲೋಪ ದೋಷ

ಗಳು ಏನೆಂಬುದನ್ನು ತಿಳಿಯುವಷ್ಟು ಕಾವ್ಯಜ್ಞಾನ ಇಲ್ಲದಿರಬೇಕು. ರಾಜನು ಕವಿತ್ವ ಹೇಳಿದುದಂತೂ ಇಲ್ಲವೇ ಇಲ್ಲ. ಪಂಡಿತರ ಚರ್ಚೆಗಳನ್ನು ಕೇಳಿ ಆನಂದಿಸುವುದೊಂದರ ಹೊರತು ಅವರ ಚರ್ಚೆಗಳಲ್ಲಿ ಅವನು ಭಾಗವಹಿಸುತ್ತಿರಲಿಲ್ಲ. ಆದುದರಿಂದ ರಾಜನ ಕಾವ್ಯಜ್ಞಾನ ಅಷ್ಟಕ್ಕಷ್ಟೇ ಎಂದು ಶ್ರಾವಣನು ಅಂದುಕೊಂಡನು. ಹಾಗಿರುವಾಗ ತಾನು ತನಗೆ ತಿಳಿದ ಜ್ಞಾನವನ್ನು ತೋರಿಸುವುದರಿಂದ ಯಾವ ಪ್ರಯೋಜನವೂ ಇರದು.

ಆ ಸಮಯದಲ್ಲಿ ಶಂಕರಾನಂದನೆಂಬೊಬ್ಬ ಪಂಡಿತ ಶ್ರೇಷ್ಠನು ಕಾಶಿಯಿಂದ ತನ್ನ ದೇಶಕ್ಕೆ ಹೋಗುತ್ತ, ಕಾಂಭೋಜದ ದಾರಿಯಾಗಿ ಅಲ್ಲಿಗೆ ಬಂದನು. ಅವನು ನಗರದಲ್ಲಿ ಒಂದು ದಿನ ತಂಗಿರುವ ಸಂಗತಿ ಶ್ರಾವಣನಿಗೆ ತಿಳಿಯಿತು. ಶ್ರಾವಣನು ಹೋಗಿ ಅವನ ದರ್ಶನ ಮಾಡಿ, ತನ್ನ ಕೆಲವು ಕವಿತೆಗಳನ್ನು ಅವನ ಮುಂದೆ ಪಠಿಸಿ, "ಕವಿಯಾಗಿ ನಾನು ಅಭಿವೃದ್ಧಿಗೆ ಬರಬೇಕಾದರೆ ಇವಿಷ್ಟು ಸಾಕೋ ಇನ್ನೂ ಬೇಕೋ ಎಂದು ತಿಳಿಯಲಿಕ್ಕೇ ನಿಮ್ಮ ಬಳಿಗೆ ಬಂದೆನು. ಪ್ರಸ್ತುತ ರಾಜಾಸ್ಥಾನದಲ್ಲಿ ಕವಿಯಾಗಿ ಉದ್ಯೋಗದಲ್ಲಿದ್ದೇನೆ. ನನ್ನ ಅಂತಸ್ಸನ್ನು ಕುರಿತು ತಮ್ಮ ಅಮೂಲ್ಯ ಅಭಿಪ್ರಾಯ ತಿಳಿಸಬೇಕು" ಎಂದು ಕೇಳಿಕೊಂಡನು.

ಪಂಡಿತ ಶ್ರೇಷ್ಠನಾದ ಶಂಕರಾನಂದನು ಮುಗುಳು ನಗು ನಗುತ್ತ, "ನಿನಗೆ ರಾಜಾಶ್ರಯವು ದೊರಕಿತೇನು ? ಅದು ನಿನ್ನ ವ್ಯಕ್ತಿತ್ವಕ್ಕೆ ಸಿಕ್ಕಿದ ಒಂದು ಅದೃಷ್ಟ. ನಿನ್ನ ಕವಿತಾಶಕ್ತಿಗೆ ಸಿಕ್ಕಿದೆಯೆಂದು ನನಗೆ ಅನಿಸುವುದಿಲ್ಲ. ಏಕೆಂದರೆ ನೀನು ಕವಿ ಎಂದು ತಲೆ ಎತ್ತಿ ತಿರುಗಬೇಕಾದರೆ ಇನ್ನೂ ಎಷ್ಟೋ ಅಭ್ಯಾಸ ಮಾಡಬೇಕಾಗಿದೆ. ಹೀಗೆ ಹೇಳಿದೆನೆಂದು ಬೇಸರ ಪಡಬೇಡ. ದೊಡ್ಡ ಕವಿಯಾಗಬಲ್ಲ ಯೋಗ್ಯತೆಗಳು ನಿನ್ನಲ್ಲಿವೆ, ಇನ್ನೂ ಪರಿಶ್ರಮವಾಗಬೇಕು" ಎಂದನು.

ಶ್ರಾವಣನು ಶಂಕರಾನಂದನಿಗೆ ತನ್ನ ಕೃತಜ್ಞತೆ ಹೇಳಿ ಸಾಷ್ಟಾಂಗ ನಮಸ್ಕಾರಮಾಡಿ, ಅಲ್ಲಿಂದ ಸೀದಾ ಚಂದ್ರಪಾಲರಾಜನ ಮುಖ್ಯಮಂತ್ರಿಯಾದ ವಿಶಾ





ಲಾಕ್ಷನ ಬಳಿಗೆ ಹೋಗಿ, "ಅಯ್ಯಾ, ನಾನೊಬ್ಬ ಕವಿಯೆಂದು ನನಗಿರುವ ಸ್ವಲ್ಪ ಮಾತ್ರ ಪಾಂಡಿತ್ಯವನ್ನು ಮೆಚ್ಚಿಕೊಂಡು, ಮಹಾರಾಜರು ತಮ್ಮ ಆಸ್ಥಾನದಲ್ಲಿ ನನಗೆ ಪದವಿ ಕೊಟ್ಟುದಕ್ಕೆ ಬಹಳ ಕೃತಜ್ಞನಾಗಿದ್ದೇನೆ. ಇನ್ನೂ ವಿದ್ಯಾಭ್ಯಾಸ ಮಾಡಲಿಕ್ಕಾಗಿ ಕಾಶಿಗೆ ಹೋಗಬೇಕೆಂದಿದ್ದೇನೆ. ದಯಮಾಡಿ ನನಗೆ ಅಪ್ಪಣೆ ಕೊಡಬೇಕು" ಎಂದನು.

ಮಂತ್ರಿ ಶ್ರಾವಣನ ಮುಖವನ್ನು ಒಮ್ಮೆ ಪರೀಕ್ಷಿಸಿ ನೋಡಿ, "ಶ್ರಾವಣಾ, ನೀನು ಕೇವಲ ಮರ್ಯಾದೆ ಮನ್ನಣೆಗಳನ್ನು ತಿಳಿದವನು. ಒಳ್ಳೆಯ ತಿಳುವಳಿಕೆಯುಳ್ಳವನು. ಹಾಗಿರುವಾಗ ನಿನಗೆ ಆಶ್ರಯ ಕೊಟ್ಟ ರಾಜನ ಮುಂದೆ ಅಪ್ಪಣೆ ಕೇಳುವುದನ್ನು ಬಿಟ್ಟು, ನನ್ನ ಹತ್ತಿರ ಬಂದು ಕೇಳುವುದು ಧರ್ಮವಾಗದು" ಎಂದನು ವಿಶಾಲಾಕ್ಷ ಮಂತ್ರಿ.

ಅದಕ್ಕೆ ಶ್ರಾವಣನು ಕಿರುನಗುವಿನೊಂದಿಗೆ, "ಅಯ್ಯಾ, ತಾವು ಆ ಸಂಗತಿಯನ್ನು ನನಗೆ ಎಚ್ಚರಿಸಬೇಕಾಗಿಯೇ ಇಲ್ಲ. ಮಹಾರಾಜರ ಆದರಾಭಿಮಾನಗಳನ್ನು ಮರೆತು ಬೇರೆ ವಿಧವಾಗಿ ಪ್ರವರ್ತಿಸುವಂತಹ ಕೃತಘ್ನನು ನಾನಲ್ಲ." ಎಂದನು.

ತರುವಾಯ ಶ್ರಾವಣನು ರಾಜನ ಬಳಿಗೂ ಹೋಗಿ ಮಂತ್ರಿಗೆ ಹೇಳಿದ ಕಾರಣವನ್ನೇ ಹೇಳಿ, ಅಪ್ಪಣೆ ಪಡೆದು ಬರಿಗೈಯಿಂದಲೇ ಹೊರಟು ಹೋದನು.

ಬೇತಾಳವು ಹೀಗೆ ಕಥೆಯನ್ನು ಮುಗಿಸಿ, "ರಾಜಾ! ಶ್ರಾವಣನು ತನ್ನನ್ನು ಕುರಿತು ಆಶುಕವಿತೆ ಹೇಳಿದ ಮಾತ್ರಕ್ಕೇ ಮೆಚ್ಚಿ, ರಾಜನು ಅವನಿಗೆ ಆಸ್ಥಾನದಲ್ಲಿ ಪದವಿ ಕೊಟ್ಟಿದ್ದಾನೆ. ಹೀಗೆ ದೊರಕಿದ ಒಳ್ಳೆಯ ಅವಕಾಶವನ್ನು ಶ್ರಾವಣನು ಜಾರಬಿಟ್ಟು ಹೋದುದು ಅವಿವೇಕವಲ್ಲವೇನು? ಇದು ಕೇವಲ ಅವನ ಸ್ವಯಂಕೃತ್ಯ ತಾನೇ? ಸಭೆಯಲ್ಲಿ ಅವನು ಯಾವ ಕವಿಯನ್ನೂ, ಪಂಡಿತನನ್ನೂ ಆಕ್ಷೇಪಿಸಿ ಚಕಾರ ಎತ್ತಿದವನಲ್ಲ. ಅವರೆಲ್ಲಾ ತಮ್ಮ ತಮ್ಮ ವಿದ್ವತ್ತುಗಳನ್ನಿಟ್ಟುಕೊಂಡು ಸುಖವಾಗಿ ಕಾಲ ಕಳೆಯುವವರೇ. ಆದರೆ ಶ್ರಾವಣನು ನಿಜವಾದ ಕವಿ ಎನಿಸಿಕೊಳ್ಳಬೇಕಾದರೆ ಇನ್ನೆಷ್ಟೋ ಕಲಿತು ಅಭ್ಯಾಸ ಮಾಡಬೇಕೆಂದು ಶಂಕರಾನಂದನು ಹೇಳಿದ್ದಾನೆ. ಅಂಥವನನ್ನು ಹೊಗಳಿ ಹೇಳಿದುದರಲ್ಲಿ ಆ ಮಂತ್ರಿಯ ಉದ್ದೇಶವೇನು? ಇದಕ್ಕೆ ತಕ್ಕ ಉತ್ತರ ತಿಳಿದೂ ಹೇಳದಿದ್ದರೆ ನಿನ್ನ ತಲೆ ಒಡೆದು ಪುಡಿಪುಡಿಯಾಗಿ ಹೋಗುತ್ತದೆ."

ಅದಕ್ಕೆ ತ್ರಿವಿಕ್ರಮನು ಹೀಗೆಂದನು: "ಶ್ರಾವಣನು ಒಳ್ಳೆಯ ತಿಳುವಳಿಕೆಯುಳ್ಳವನೆನ್ನಲು ಯಾವ ಸಂದೇಹವೂ ಇಲ್ಲ. ಆದರೆ ಇಲ್ಲಿ ಕಥಾ ಸಂದರ್ಭವನ್ನು ಹಿಡಿದು ಮುಖ್ಯವಾಗಿ ನೋಡಬೇಕಾದುದು ಶ್ರಾವಣನು ಎಷ್ಟರಮಟ್ಟಿಗೆ ನಿಜವಾದ ಕವಿ ಎಂಬುದಾಗಿದೆ. ಅವನಿಗೆ ರಾಜಾಶ್ರಯದಲ್ಲಿ ಕವಿಯ ಅಂತಸ್ತು ಸಿಕ್ಕಿದುದನ್ನು ತಿಳಿದು ಶಂಕರಾನಂದನು

ಆಶ್ಚರ್ಯ ವ್ಯಕ್ತಪಡಿಸಿದ್ದಾನೆ. ಆ ಅಂತಸ್ತು ಅವನಿಗೆ ವೈಯಕ್ತಿಕ ಅದೃಷ್ಟವೆಂದು ಸೂಚಿಸಿ, ಕವಿಯಾಗಲಿಕ್ಕೆ ಇನ್ನೆಷ್ಟೋ ಕಲಿತು ಪಳಗಬೇಕೆಂದೂ ಹೇಳಿದ್ದಾನೆ. ಜ್ಞಾನದಾಹವಿರುವ ಶ್ರಾವಣನು ತನ್ನನ್ನು ತಾನು ಅಭಿವೃದ್ಧಿಗೇರಿಸಿಕೊಳ್ಳುವ ಆಕಾಂಕ್ಷೆಯುಳ್ಳವನು. ಅಂಥವನಿಗೆ ಅವನ ಗುಣದೋಷಗಳನ್ನು ಎತ್ತಿ ತೋರಿಸುವ ಮಾರ್ಗದರ್ಶಿ ಬೇಕಾಗಿತ್ತು. ಚಂದ್ರ ಪಾಲನ ಆಸ್ಥಾನದಲ್ಲಿ ಅಂಥವರಾರೂ ಅವನಿಗೆ ಕಾಣಲಿಲ್ಲ. ಅವನ ಹೀನ ಕವಿತ್ವವನ್ನೇ ಕೇಳಿ ಚಂದ್ರಪಾಲನು ಆನಂದಿಸಿದ್ದಾನೆ. ಅಂತಹ ರಾಜಾಸ್ಥಾನದಲ್ಲಿ ಸ್ಥಾನ ಗಿಟ್ಟಿಸಿಕೊಂಡ ಶ್ರಾವಣನು ಎಂದಿಗೂ ನಿಜವಾದ ಕವಿಯಾಗಲು ಸಾಧ್ಯವಿಲ್ಲ. ಅದಕ್ಕೇ ಅವನು ಬೇರೊಂದು ಕಡೆಗೆ ಹೋಗಲು ನಿಶ್ಚಯಿಸಿದನು."

"ರಾಜಾ ಚಂದ್ರಪಾಲನು ಅಷ್ಟೊಂದು ಬುದ್ಧಿ ವಂತನೂ ವಿವೇಕಿಯೂ ಅಲ್ಲವೆಂದು ಶ್ರಾವಣನಿಗೆ ಅನುಮಾನವಾಯಿತು. ಅದು ನಿಜವಾದರೆ ರಾಜ್ಯ ಪಾಲನೆ ಸುಗಮವಾಗಿಸಬೇಕಾದರೆ, ಹಿಂದೆ ಇದ್ದು ಚಕ್ರ ತಿರುಗಿಸುವ ಸೂತ್ರಧಾರನು ವಿಶಾಲಾಕ್ಷನೇ ಆಗಿರಬೇಕೆಂದು ಶ್ರಾವಣನಿಗೆ ತೋರಿತು. ಆದುದ ರಿಂದಲೇ ಶ್ರಾವಣನು ಮೊದಲು ವಿಶಾಲಾಕ್ಷನಿಗೆ ಕೃತಜ್ಞತೆ ಹೇಳಿ ಅಪ್ಪಣೆ ಪಡೆದಿದ್ದಾನೆ. ಇಷ್ಟೆಲ್ಲಾ ಊಹಿಸಿಕೊಂಡವನನ್ನು ವಿಶಾಲಾಕ್ಷ ಮಂತ್ರಿ ಬುದ್ಧಿ ವಂತನೆಂದು ಪ್ರಶಂಸಿಸಿದ್ದಾನೆ. ಇದರಲ್ಲಿ ಆಶ್ಚರ್ಯ ಪಡತಕ್ಕುದೇನಿಲ್ಲ.

"ಆಶ್ರಯದಾತನಾದ ರಾಜನಲ್ಲಿ ಹೇಳದೆ ಮೊದಲು ತನ್ನೊಂದಿಗೆ ಹೇಳುವುದು ಧರ್ಮವಲ್ಲವೆಂದು ವಿಶಾಲಾಕ್ಷ ಮಂತ್ರಿ ಹೇಳಿದುದರಲ್ಲಿ ಎಚ್ಚರಿಕೆಯ ಒಂದು ಸೂಚನೆಯೂ ಇದೆ. ಅದೇನೆಂದರೆ, ರಾಜ ನಾದ ಚಂದ್ರಪಾಲನ ಅಜ್ಞಾನವನ್ನು ಕುರಿತು ಎಲ್ಲಿಯೂ ಹೊರಗೆ ಹಾಕಬಾರದೆಂಬುದೇ. ಸೂಕ್ಷ್ಮ ಗ್ರಾಹಿಯಾದ ಶ್ರಾವಣನು ಅದನ್ನು ಅರ್ಥಮಾಡಿ ಕೊಂಡುದರಿಂದಲೇ, ರಾಜನ ಆದರಾಭಿಮಾನಗಳನ್ನು ಮರೆಯುವಂತಹ ಕೃತಘ್ನನು ತಾನಲ್ಲವೆಂದು ನಂಬುಗೆ ಹೇಳಿದ್ದಾನೆ.

"ಚಂದ್ರಪಾಲ ರಾಜನು ಅಷ್ಟೊಂದು ಬುದ್ಧಿವಂತ ನಲ್ಲದಿರಬಹುದು. ಆದರೆ ಒಳ್ಳೆಯ ಗುಣವುಳ್ಳ ಉದಾರನು. ಆ ಸಂಗತಿ ಶ್ರಾವಣನಿಗೂ ವಿಶಾಲಾಕ್ಷ ಮಂತ್ರಿಗೂ ಚೆನ್ನಾಗಿ ಗೊತ್ತಿತ್ತು. ರಾಜನ ವಿಷಯ ದಲ್ಲಿ ಅವರೊಳಗೆ ಕಾಣುವ ಭೇದವು, ಅವರವರ ಸ್ಥಾನಗಳಿಗೆ ಅನುಗುಣವಾಗಿಯೇ ಇದ್ದಿತು."

ಹೀಗೆ ಮೌನಭಂಗವಾದ ಕೂಡಲೇ ಬೇತಾಳವು ಶವದೊಂದಿಗೆ ಮಾಯವಾಗಿ ಹೋಗಿ ಮರದ ಕೊಂಬೆಗೆ ತಗಲಿ ನೇತಾಡತೊಡಗಿತು.





# ನಿಯಮತಪ್ಪಿದವನು

ವಿಂಧ್ಯ ಪರ್ವತ ಪ್ರಾಂತದೊಳಗಿನ ಒಂದಾನೊಂದು ಸರೋವರದ ತೀರದ ಪ್ರಶಾಂತ ಪ್ರದೇಶದಲ್ಲಿ ಒಂದು ಗುರುಕುಲವಿದ್ದಿತು, ಮಾತಂಗಸ್ವಾಮಿ ಎಂಬ ಮಹಾ ಪಂಡಿತನು ಅದನ್ನು ನಡೆಯಿಸಿಕೊಂಡಿದ್ದನು. ಅವನ ಗುರುಕುಲದಲ್ಲಿ ದೊಡ್ಡ ದೊಡ್ಡ ಶ್ರೀಮಂತರ ಕುಟುಂಬಗಳಿಂದ ಬಂದ ಅನೇಕ ಮಂದಿ ವಿದ್ಯಾರ್ಥಿಗಳೂ ಓದಿಕೊಳ್ಳುತ್ತಿದ್ದರು. ಬಡವರ ಮನೆಗಳ ಹುಡುಗರೂ ಇದ್ದರು. ಆ ದೇಶವನ್ನಾಳುವ ರಾಜನ ಬಾವನ ಮಗನಾದ ವಿರೂಪನೆಂಬವನು ಕೂಡಾ ಆ ಗುರುಕುಲದಲ್ಲಿದ್ದು ವಿದ್ಯಾಭ್ಯಾಸ ಮಾಡುತ್ತಿದ್ದನು.

ವಿರೂಪನು ಸ್ವಲ್ಪ ಅಣಕಿಸುವ ಗುಣ ಉಳ್ಳವನು. ಅವನು ಆಗಾಗ ಗುರುಕುಲದ ನಿಯಮಗಳನ್ನು ಉಲ್ಲಂಘಿಸಿ ಪ್ರವರ್ತಿಸುತ್ತಿದ್ದನು. ಮಾತಂಗಸ್ವಾಮಿ ಅವನನ್ನು ಖಂಡಿಸುತ್ತಲೂ ಇದ್ದನು. ಈ ಕೋಪವನ್ನು ಮನಸ್ಸಿನಲ್ಲಿಟ್ಟುಕೊಂಡು ವಿರೂಪನು ಜತೆಗಾರರೊಂದಿಗೆ ಗುರುವನ್ನು "ಕುಂಟು ಗುರು" ಎಂದು ಲೇವಡಿ ಮಾಡಿ ಹೇಳುವನು. ನಿಜಕ್ಕೂ ಮಾತಂಗಸ್ವಾಮಿಯ ಬಲಗಾಲು ಸ್ವಲ್ಪ ಕುಂಟು.

ಒಂದು ದಿನ ಮಾತಂಗಸ್ವಾಮಿ, ಶಿಷ್ಯರಿಗೆ ಪಾಠ ಹೇಳುವುದು ಪೂರ್ತಿಯಾದ ಮೇಲೆ, ಒಂದು ಕಥೆಯನ್ನು ಹೇಳತೊಡಗಿದನು. ಅದೇನೆಂದರೆ,

ಈಗ ಸುಮಾರು ಐವತ್ತು ವರ್ಷಗಳ ಹಿಂದೆ, ಸರೋವರದ ಆಚೆಯ ತೀರದಲ್ಲಿ ಭೈರವಾನಂದರೆಂಬ ಮಹಾ ವಿದ್ವಾಂಸರು ಒಂದು ಗುರುಕುಲ ನಡೆಸಿಕೊಂಡಿದ್ದರು. ಅವರು ಎಲ್ಲಾ ಶಾಸ್ತ್ರಗಳಲ್ಲಿಯೂ ಪರಿಣತರಾಗಿದ್ದುದು ಮಾತ್ರವಲ್ಲದೆ, ಮಂತ್ರಶಾಸ್ತ್ರಗಳಲ್ಲಿ ಕೂಡಾ ಮಹಾನಿಧಿಗಳು. ತಮ್ಮ ಶಿಷ್ಯರ ವಿದ್ಯಾಭ್ಯಾಸವೆಲ್ಲ ಪೂರ್ತಿಯಾದ ಮೇಲೆ, ಇಷ್ಟ ಉಳ್ಳವರಿಗೆ ಮಂತ್ರಶಾಸ್ತ್ರಗಳನ್ನೂ ಕಲಿಸುತ್ತಿದ್ದರು. ಅಂಥವರು ತಮ್ಮ ಸಾಧನೆಗಳಿಂದ, ದೊಡ್ಡ ಮಂತ್ರವಾದಿಗಳಾಗಿ ಪ್ರಸಿದ್ಧರಾಗುತ್ತಿದ್ದರು.

ಒಂದು ಸಾರಿ ಸುಭಾನು ಮತ್ತು ಮತಂಗ ಎಂಬ ಇಬ್ಬರು ಶಿಷ್ಯ ಗೆಳೆಯರು ತಮ್ಮ ವಿದ್ಯೆಗಳು ಮುಗಿದ ಮೇಲೆ, ಯಾವುದಾದರೊಂದು ಮಂತ್ರಶಾಸ್ತ್ರವನ್ನು ತಮಗೆ ಉಪದೇಶ ಮಾಡಬೇಕೆಂದು ಕೇಳಿಕೊಂಡರು. ಅದಕ್ಕೆ ಭೈರವಾನಂದರು ಒಪ್ಪಿಕೊಂಡು, ಅವರಿಬ್ಬರಿಗೂ ಒಂದೇ ಬಗೆಯ ಮಂತ್ರ

ಜಿ. ಸಾಂಬ



ವನ್ನು ಉಪದೇಶ ಮಾಡಿ, ಅದು ಫಲಿಸುವ ಸಾಧನ ವಿಧಾನಗಳನ್ನು ತಿಳಿಸಿ, "ಅಪ್ಪಗಳಿರಾ, ಈ ಮಂತ್ರದ ಮೂಲಕ ನೀವು ಇಷ್ಟಪಡುವ ರೂಪಗಳನ್ನು ಧರಿಸ ಬಲ್ಲಿರಿ. ಆದರೆ ಇದಕ್ಕೆ ಕೆಲವು ನಿಯಮ ನಿಬಂಧನೆ ಗಳಿವೆ. ಅತ್ಯಗತ್ಯ ಬಿದ್ದಾಗಲಷ್ಟೇ ನೀವು ಈ ಮಂತ್ರವನ್ನು ಉಪಯೋಗಿಸಿಕೊಳ್ಳಬೇಕು. ಕೇವಲ ಮಂತ್ರಶಕ್ತಿಯನ್ನು ಪರೀಕ್ಷಿಸಲಿಕ್ಕಾಗಿಯೋ, ಹೊತ್ತು ಹೋಗಲಿಕ್ಕಾಗಿಯೋ, ಅಲ್ಪ ಕಾರಣಕ್ಕಾಗಿಯೋ ಇದನ್ನು ಉಪಯೋಗಿಸಬಾರದು. ಯಾವ ಕಾರಣ ದಿಂದಲೋ ಅಂಗವೈಕಲ್ಯತೆಯುಂಟಾದರೂ ಈ ಮಂತ್ರವು ವ್ಯರ್ಥವಾಗುತ್ತದೆ. ಎಚ್ಚರಿಕೆಯಿಂದಿರಿ" ಎಂದು ಉಪದೇಶ ಮಾಡಿದನು.

ಶಿಷ್ಯರಿಬ್ಬರೂ ಗುರುವಿನಿಂದ ಅಪ್ಪಣೆ ಪಡೆದು ಅಲ್ಲಿಂದ ಹೊರಟರು. ರಾಜಾಸ್ಥಾನದಲ್ಲಿ ಏನಾದರೂ ಉದ್ಯೋಗ ಸಂಪಾದಿಸುವ ಉದ್ದೇಶದಿಂದ ರಾಜ ಧಾನಿಯ ದಾರಿ ಹಿಡಿದು ಸಾಗಿದರು. ದಾರಿಯಲ್ಲಿ ಅವರಿಗೆ ಒಂದು ನದಿಯನ್ನು ದಾಟಬೇಕಾಗಿ ಬಂದಿತು. ದೋಣಿಯವನು ಆಚೆಯ ತೀರದಲ್ಲಿದ್ದನು.

ಆಗ ಮತಂಗನು ಸುಭಾನುವಿನೊಂದಿಗೆ, "ಆ ತೀರದಿಂದ ಇಲ್ಲಿಗೆ ಬರುವ ಮನುಷ್ಯರು ದೊರಕುವ ವರಗೂ ದೋಣಿ ಇಲ್ಲಿಗೆ ಬರಲಾರದು. ನಮಗೆ ಮಂತ್ರ ಗೊತ್ತಿದೆಯಷ್ಟೇ ? ನಾವೀಗ ಮೀನುಗಳ ರೂಪತಾಳಿ ನದಿಯಲ್ಲಿ ಈಜುತ್ತಾ ಆಚೆಯ ತೀರಕ್ಕೆ ಹೋಗಿಬಿಡೋಣ. ದೋಣಿಯವನಿಗೆ ಕೊಡುವ ಹಣ ಉಳಿಯುತ್ತದೆ" ಎಂದನು.

"ಮಂತ್ರಶಕ್ತಿಯನ್ನು ಕೇವಲ ಈ ಸಣ್ಣ ಕೆಲಸ ಕ್ಕಾಗಿ ಉಪಯೋಗಿಸುವುದು ಒಳ್ಳೆಯದಲ್ಲವೆಂದು ಗುರುಗಳು ಎಚ್ಚರಿಸಿದ್ದಾರೆ, ಮರೆತೆಯಾ ? ಪರೀಕ್ಷಿಸಿ ನೋಡುವುದೂ ತಪ್ಪು" ಎಂದನು ಸುಭಾನು.

ಅವನ ಮಾತು ಕೇಳಿ ಮತಂಗನು, "ಆದೊಂದು ದೊಡ್ಡ ಎಚ್ಚರಿಕೆಯೇನಲ್ಲ. ಈಜಿ ನದಿ ದಾಟಿದರೆ ಅಲ್ಪ ಕಾರ್ಯವೂ ಅಲ್ಲ. ನೀನು ಬೇಕಾದರೆ ದೋಣಿಯಲ್ಲೇ ಬಾ. ನಾನು ಮೀನಿನ ರೂಪದಲ್ಲಿ ನದಿ ದಾಟಿಬಿಡುತ್ತೇನೆ" ಎಂದು ಮೀನಿನ ರೂಪ ಧರಿಸಿ ನದಿಯನ್ನು ಈಜಿ ದಾಟಿ ಆಚೆಯ ತೀರ ವನ್ನು ಸೇರಿದನು.

ಸ್ವಲ್ಪ ಹೊತ್ತಿನ ಮೇಲೆ ಸುಭಾನು ದೋಣಿಯಲ್ಲಿ ನದಿಯನ್ನು ದಾಟಿ ಮತಂಗನನ್ನು ಸೇರಿಕೊಂಡನು. ಅಲ್ಲಿಂದ ಇಬ್ಬರೂ ಮುಂದೆ ಹೊರಟರು. ಕಾಲು ನಡಿಗೆಯಲ್ಲಿ ರಾಜಧಾನಿಗೆ ಹೋಗುವುದು ಬಹಳ ಶ್ರಮವಾಗಿ ತೋರಿತು ಮತಂಗನಿಗೆ.

"ನಾವು ಯಾವ ಪಕ್ಷಿಯ ರೂಪವೋ ಧರಿಸಿ ಸುಲಭವಾಗಿ ರಾಜಧಾನಿಗೆ ತಲಪಬಹುದು. ನಡೆ ಯುವ ಕಷ್ಟವೇಕೆ ? " ಎಂದು ಮತಂಗನು ಸುಭಾನು ವೊಂದಿಗೆ ಹೇಳಿದನು.

ಇದಕ್ಕೂ ಸುಭಾನು ಒಪ್ಪಿಕೊಳ್ಳಲಿಲ್ಲ. ಮತಂಗನು ಅವನನ್ನು ಪುಕ್ಕಲು ಮನುಷ್ಯನೆಂದೂ, ಅವಿವೇಕಿ

ಎಂದೂ ನಿಂದಿಸಿಕೊಂಡು, ತಾನು ಬೇಗನೇ ಹೋಗಿ ರಾಜಧಾನಿಯಲ್ಲಿ ಕಾಯುವೆನೆಂದು ಹೇಳಿ, ಪಾರಿವಾಳದ ರೂಪ ಧರಿಸಿ ಆಕಾಶಕ್ಕೆ ಹಾರಿದನು. ಅವನು ಆಕಾಶದಲ್ಲಿ ಸ್ವಲ್ಪ ದೂರ ಪ್ರಯಾಣಿಸಿ, ಬಳಲಿಕೆ ತೀರಿಸಿಕೊಳ್ಳಲು ಒಂದು ಮರದ ಕೊಂಬೆಯಲ್ಲಿ ಎರಗಿದನು. ಆಗ ಒಂದು ಹದ್ದು ಆಕಾಶದಲ್ಲಿ ತಿರುಗುತ್ತಾ, ಮರದ ಕೊಂಬೆಯಲ್ಲಿದ್ದ ಪಾರಿವಾಳವನ್ನು ನೋಡಿ, ರಿವ್ವನೆ ಬಂದು ಅದನ್ನು ಕಾಲುಗುರುಗಳಲ್ಲಿ ಹಿಡಿದು ಮತ್ತೆ ಆಕಾಶಕ್ಕೆ ಹೋಯಿತು. ಆದರಿಂದ ತಪ್ಪಿಸಿಕೊಳ್ಳಲು ಮತಂಗನು ಪಾರಿವಾಳದ ರೂಪದಿಂದ ನಿಜರೂಪಕ್ಕೆ ಬಂದನು.

ತನ್ನ ಉಗುರಿನೆಡೆಯಲ್ಲಿ ಸಿಕ್ಕಿದ ಪಕ್ಷಿ ಮನುಷ್ಯನಾಗಿ ಬದಲಾಯಿಸುವುದನ್ನು ನೋಡಿ ಹದ್ದು ಹೆದರಿ ಅವನನ್ನು ಕೆಳಕ್ಕೆ ಬಿಟ್ಟಿತು. ಮತಂಗನು ಬಹಳ ಎತ್ತರದಿಂದ ಕೆಳಗಿರುವ ಪೊದರುಗಳ ಮೇಲೆ ಬಿದ್ದನು. ಆದರಿಂದ ಅವನಿಗೆ ಪ್ರಾಣಾಪಾಯವಾಗದಿದ್ದರೂ ಶರೀರಕ್ಕೆ ಪೆಟ್ಟಾಗಿ, ಬಲದ ಕಾಲು ಮುರಿಯಿತು.

ಆ ದಾರಿಯಾಗಿ ಹೋಗುವ ತೀರ್ಥಯಾತ್ರಿಕರು ಮತಂಗನನ್ನು ಎತ್ತಿಕೊಂಡು ಹೋಗಿ ಕಾಪಾಡಿದರು. ಕೆಲವು ದಿನಗಳ ಮೇಲೆ ನೋವು ತಗ್ಗಿತು. ಅವನು ಗುರುಗಳಾದ ಭೈರವಾನಂದರ ಬಳಿಗೆ ಹೋಗಿ ನಡೆದ ಸಮಾಚಾರವನ್ನೆಲ್ಲಾ ಹೇಳಿ ದುಃಖಿಸಿದನು. ಭೈರವಾನಂದರು ಅವನನ್ನು ಸಮಜಾಯಿಸಿ, ಮುರಿದ ಕಾಲಿಗೆ ಎಷ್ಟೋ ಚಿಕಿತ್ಸೆಗಳನ್ನು ಮಾಡಿದರು. ಗಾಯ ಮಾಸಿಹೋಯಿತೇ ಹೊರತು ಕಾಲು ಕುಂಟಾಗಿಯೇ ನೆಲೆಸಿತು. ಈ ಅಂಗವೈಕಲ್ಯದಿಂದ ಗುರುಗಳು ಉಪದೇಶಿಸಿದ ಮಂತ್ರವು ಉಪಯೋಗಕ್ಕೆ ಬಾರದೆ ಹೋಯಿತು. ಸುಭಾನು ಮಾತ್ರ ರಾಜಾಸ್ಥಾನದಲ್ಲಿ ಪದವಿಯನ್ನು ಸಂಪಾದಿಸಿ ಕಾಲಕ್ರಮದಲ್ಲಿ ವಿದ್ಯಾಶಾಖಾಧಿಕಾರಿಯ ಪದವಿಗೆ ಏರಿ ಚೆನ್ನಾಗಿ ಬಾಳುವಂತಾದನು.

ಮಾತಂಗಸ್ವಾಮಿ ಕಥೆಯನ್ನು ಮುಗಿಸಿ, "ಗುರುಗಳು ಹೇಳಿದ ನಿಬಂಧನೆಗಳನ್ನು ಅಲಕ್ಷ್ಯಪಡಿಸಿ ಉಲ್ಲಂಘಿಸಿದುದರಿಂದ ಮತಂಗನು ಕುಂಟನಾಗಿ, ಮಂತ್ರದಿಂದ ಲಭಿಸಿದ ಅಪೂರ್ವ ಶಕ್ತಿಗಳನ್ನೂ ಕಳೆದುಕೊಂಡನು. ಆ ಮತಂಗನು ನಾನೇ! ಗುರುವಿನ ಮೇಲೆ ಭಕ್ತಿ ಗೌರವಗಳಿಲ್ಲದವನು ಎಂದಿಗೂ ವಿದ್ಯಾವಂತನೆನಿಸಲಾರನು" ಎಂದು ಹೇಳಿ ಕುಂಟುತ್ತಾ ಕುಟೀರದೊಳಗೆ ಹೋದನು.

ಆಮೇಲೆ ವಿರೂಪನು ಎಂದಿಗೂ ಗುರುಕುಲದ ನಿಯಮಗಳನ್ನು ಉಲ್ಲಂಘಿಸಲಿಲ್ಲ. ಜತೆಗಾರರೊಂದಿಗೆ ಮಾತಂಗಸ್ವಾಮಿಯನ್ನು ಗೇಲಿಯಾಗಿ ಹೇಳುವುದನ್ನೂ ಮರೆತುಹೋದನು.






ಒಂದು ಊರಿನಲ್ಲಿ ಒಬ್ಬ ಸಂಸಾರಸ್ಥನಿದ್ದನು. ಅವನು ಎಷ್ಟು ಸಾಧು ಗುಣದವನೋ ಅಷ್ಟೇ ಗಂಡುಬೀರಿ ಯಾಗಿದ್ದಳು ಅವನ ಹೆಂಡತಿ. ಗಂಡನು ಅವಳು ಹೇಳಿದಂತೆ ಕೇಳುವ ಪಾಪದವನಾದುದರಿಂದ ಅವಳು ಇನ್ನಿಷ್ಟು ಕಡಿಯಲಾಗದ ಕಟ್ಟಿಗೆಯಂತಾದಳು.

ಹೆಂಡತಿ ಮನೆಗೆ ಬಂದ ಹೊಸತರಲ್ಲಿ ಗಂಡನು ತನ್ನ ಪಾಡಿಗೆ ಗಂಡುಸರು ಮಾಡುವ ಕೆಲಸಗಳನ್ನೇ ಮಾಡಿಕೊಂಡಿದ್ದನು. ಆದರೆ ಹೊಸ ಹೆಂಡತಿಯ ಮೋಹವು ಅವನನ್ನು ಸ್ವಲ್ಪ ಮರುಳಿಗೀಡುಮಾಡಿ ದುದರಿಂದ, ಅವಳು ಹೇಳುವ ಕೆಲವು ಹೆಣ್ಣು ಕೆಲಸಗಳೂ ಅವನ ಮೇಲೆ ಬೀಳತೊಡಗಿದುವು. ಆದರೆ ಅವನು ಮಾಡುವ ಹೊಲದ ಕೆಲಸ ಮೊದ ಲಾದ ಗಂಡುಗೆಲಸಗಳಲ್ಲಿ ಅವಳು ಸಾಸಿವೆಯಷ್ಟೂ ಸಹಾಯ ಮಾಡುತ್ತಿರಲಿಲ್ಲ. ಅದರ ಮೇಲೆ ಮನೆ ಗೆಲಸಗಳು ಕೂಡಾ ಅವನಿಗೇ ಅಂಟಿಸಿಬಿಟ್ಟಳು. ದನ ಗಳನ್ನೂ ಅವನೇ ನೋಡಬೇಕು, ಮೇಕೆಗಳನ್ನೂ ಅವನೇ ನೋಡಬೇಕು. ನೀರು ತುಂಬಿಸುವುದು, ಕಸ ಉಡುಗುವುದು, ಬಟ್ಟೆ ಒಗೆಯುವುದು, ಒಲೆ ಹಚ್ಚುವುದು ಹೊಗೆ ಊದುವುದು ಮುಂತಾದು ವೆಲ್ಲಾ ಅವನ ಮೇಲೆಯೇ ಬಿದ್ದುವು. ಅದೆಲ್ಲಾ ಮದುವೆಯಾದ ತನ್ನ ಕರ್ತವ್ಯವೆಂತಲೇ ಅವನ ಭಾವನೆಯಾಗಿತ್ತು.

ಅಷ್ಟೇ ಅಲ್ಲ, ಅವಳ ಬಾಯಿಗೆ ಅಡ್ಡ ಬಾರದಂತಿರು ವುದು ಕೂಡಾ ತನ್ನ ಕರ್ತವ್ಯವೆಂಬಂತಿದ್ದನು. ಗಂಡನು ಕಷ್ಟಪಟ್ಟು ಹೊಲ್ಲದ ಚಾಕರಿ ಮಾಡುತ್ತಿದ್ದರೂ ಎಲ್ಲದರಲ್ಲಿಯೂ ತಪ್ಪು ಹಿಡಿದು ದಿನವಿಡೀ ಬಯ್ಯು ತ್ತಿರುವುದೇ ಅವಳ ಕೆಲಸವಾಯಿತು. ಅಷ್ಟೂ ಶ್ರಮವಿಲ್ಲದಿದ್ದರೆ ಅವಳಿಗೆ ಜೀರ್ಣಕ್ಕೆ ಬರುವು ದಾದರೂ ಹೇಗೆ ? ಅವನು ಮಾಡುವ ಕೆಲಸಗಳಿಗೂ ಮಾಡದಿರುವ ಕೆಲಸಗಳಿಗೂ ತಪ್ಪುಹಿಡಿದು ಬಯ್ಯು ವಳು. ಹೆಂಡತಿಯ ಬೈಗುಳನ್ನೂ ಶಾಪನಾರ್ಥ ಗಳನ್ನೂ ಅರ್ಥಮಾಡಿಕೊಳ್ಳುವಷ್ಟು ತೀರಿಕೆಯೂ ಅವನಿಗಿಲ್ಲ. ಕೆಲಸ ಮಾಡುತ್ತ ಅವನು ಅತ್ತ ಇತ್ತ ತಿರುಗುತ್ತಿರಲು, ಅವಳು ಒಂದು ಕಡೆ ನಿಂತು ಅವನಿಗೆ ಕೇಳುವ ಹಾಗೆ, "ಅಯ್ಯಯ್ಯ ! ಒಂದು ಕೆಲಸವೂ ಸರಿಯಾಗಿ ಮಾಡಲು ಗೊತ್ತಿಲ್ಲ ! ಯಾವುದು ಮೊದಲು ಮಾಡಬೇಕು ಯಾವುದು ಮತ್ತೆ ಮಾಡ ಬೇಕು ಎಂಬುದು ಸಹಾ ತಿಳಿಯದು. ಇಂಥಾ



ಕೈಲಾಗದ ಹೆಟಗರನ್ನು ಕಟ್ಟಿಕೊಂಡು ಹೇಗೆ ದಿನ ಗಳೆಯಬೇಕೋ ಪರಮಾತ್ಮಾ!......" ಎಂದು ಮುಂತಾಗಿ ಸುತ್ತುಮುತ್ತಲೂ ಕೇಳುವ ಹಾಗೆ ಗಟ್ಟಿಯಾಗಿ ಕೂಗಿಕೊಳ್ಳುತ್ತಿದ್ದಳು.

ಹೆಂಡತಿಯ ಗಂಟಲಿಗೆ ತಕ್ಕ ಹಾಗೆ ತನ್ನ ಗಂಟಲು ಇಲ್ಲವೆಂದೋ, ಅವಮಾನದ ಭಯದಿಂದಲೋ ಗಂಡನು ಬಾಯಿ ಬಿಚ್ಚುತ್ತಿರಲಿಲ್ಲ. ಬಾಯಿಗೆ ಬಾಯಿ ತೆಗೆಯುವುದಂತೂ ಆಸಲೇ ಅವನಿಗಿಷ್ಟವಿಲ್ಲ. ಎಲ್ಲರೂ ತನ್ನನ್ನು ನೋಡಿ ನಗುತ್ತಿರುವುದು ಕೂಡಾ ಅವನಿಗೆ ಗೊತ್ತಿತ್ತು. ಹಾಗೆ ನಗುವ ಮಿತ್ರರನ್ನು ನೋಡಿ, "ಯಾಕೆ ಸುಮ್ಮನೆ ನಗುತ್ತೀರಿ? ನಕ್ಕವರ ಹಲ್ಲೇ ಹೊರಗೆ ಬೀಳುತ್ತೆ" ಎನ್ನುತ್ತಿದ್ದನು.

ಒಂದು ದಿನ ಹೆಂಡತಿ ಗಂಡನೊಂದಿಗೆ "ಹಾಲು ಕೆಟ್ಟು ಒಡೆಯಿತು! ಯಾವ ಕೆಲಸ ಸರಿಯಾಗಿ ಮಾಡಿದಿರಿ?" ಎಂದಳು ನಿಷ್ಠುರದಿಂದ. ಅದನ್ನು ಕೇಳಿ ಗಂಡ ಆಶ್ಚರ್ಯದಿಂದ, "ಹಾಲು ಒಡೆಯುವುದು ಕೂಡಾ ನನ್ನ ತಪ್ಪೇನು?" ಎಂದನು. "ದನದ ಕೆಚ್ಚಲು ಸರಿಯಾಗಿ ತೊಳೆದಿದ್ದರೆ ಹಾಲೇಕೆ ಕೆಡುತ್ತದೆ?" ಎಂದಳು ಹೆಂಡತಿ.

"ದನದ ಕೆಚ್ಚಲು ತೊಳೆದು ಹಿಂಡಬೇಕು ಅಂತ ನೀನು ಯಾವಾಗ ಹೇಳಿದ್ದಿ?" ಎಂದನು ಗಂಡ.

"ಅದು ಪ್ರತ್ಯೇಕ ಹೇಳಬೇಕೇನು? ಬುದ್ಧಿಯಿಲ್ಲದವರನ್ನು ಕಟ್ಟಿಕೊಂಡು ಒದ್ದಾಡಬೇಕಾಯಿತು. ಎಷ್ಟೂ ಅಂತ ನೋಡಲಾದೀತು? ಎಷ್ಟೂ ಅಂತ ಹೇಳಲಾದೀತು! ಇದೆಲ್ಲಾ ನನ್ನ ಕರ್ಮ!" ಎಂದಳು ಹೆಂಡತಿ.

"ಹೀಗೆಲ್ಲಾ ಹೇಳಿ ಉಪಯೋಗವೇನಿಲ್ಲ. ನಾನು ಮಾಡಬೇಕಾದ ಕೆಲಸಗಳು ಏನು ಏನೆಂಬುದನ್ನು ಒಂದು ಪಟ್ಟಿ ಬರೆದು ಕೊಡು. ಆಮೇಲೆ ಆ ಕೆಲಸ ಮಾಡದೆ ಹೋದರೆ ತಪ್ಪು ಹಿಡಿ. ಇದು ಬಿಟ್ಟು ಬಾಯಿಮಾತಿನಿಂದ ಬಗೆಹರಿಯುವ ಸಮಸ್ಯೆಯಲ್ಲ" ಎಂದನು ಗಂಡ.

ಅವಳು ಒಂದೊಂದೇ ಹೇಳತೊಡಗಿದಳು. ಅವಳು ಹೇಳುವುದನ್ನೆಲ್ಲಾ ಅವನು ಒಂದು ಕಾಗದದಲ್ಲಿ ಬರೆದುಕೊಂಡನು. ಆ ಪಟ್ಟಿ ಬೆಟ್ಟದ ಬಾವೀ ಹಗ್ಗದ ಹಾಗೆ ಉದ್ದವಾಗುತ್ತಾ ಹೋಯಿತು.

ಆಮೇಲೆ ಕೆಲವು ದಿನಗಳು ಕಳೆದುವು. ಸಂಕ್ರಾಂತಿ ಹಬ್ಬ ಸಮೀಪಿಸಿತು. ಹಬ್ಬದ ಮುಂಚಿನ ದಿನ ಹೆಂಡತಿ ತಮ್ಮ ಮನೆಯ ಸಮೀಪದಲ್ಲಿದ್ದ ಕೆರೆಯಲ್ಲಿ ಮಡಿವಾಳಕಟ್ಟೆ ಮಾಡಿದಳು. ಗಂಡನು ಬಟ್ಟೆಗಳನ್ನು ಒಗೆದು ಹಿಂಡಿ ಕೊಡುತ್ತಿದ್ದರೆ ಹೆಂಡತಿ ಒಣಗ ಹಾಕುತ್ತಿದ್ದಳು. ಈ ಕೆಲಸ ಮಾಡುವಾಗಲೆಲ್ಲಾ ಅವಳ ಬಾಯಿ ಸುಮ್ಮನಿರದೆ ಗಂಡನನ್ನು ಬಯ್ದುಕೊಂಡೇ ಇದ್ದಳು, "ನಾಳೆಯೇ ಹಬ್ಬ! ಅದು ಹೇಗಾಗುತ್ತೋ! ಪಟ್ಟಿ ಬರೆದುಕೊಂಡ ಮಾತ್ರಕ್ಕೆ ಏನು ಸುಖ ಬಂತು? ಎಷ್ಟೋ ಮಂದಿ ಹೆಡ್ಡರನ್ನು ನೋಡಿದ್ದೇನೆ. ನಿಮ್ಮಂಥಾ ಹೆಡ್ಡರನ್ನು ನೋಡಲೇ ಇಲ್ಲ. ಅಮ್ಮ

ಎಂದೋ ಬುದ್ಧಿ ಹೇಳಿದ್ದಾಳೆ...." ಎಂದು ಹೇಳು ವಷ್ಟರಲ್ಲಿ ಒಂದು ಆಕಸ್ಮಿಕ ನಡೆದುಹೋಯಿತು.

ಅವಳು ಬಯ್ಯುತ್ತಾ ಗಂಡನು ಹಿಂಡಿ ಕೊಟ್ಟ ಬಟ್ಟೆಯನ್ನು ಬಾಗಿ ತೆಗೆದುಕೊಳ್ಳುವಾಗ, ಒಗೆಯುವ ಕಲ್ಲಿನ ನಯವಾದ ಭಾಗದಲ್ಲಿ ಕಾಲಿಟ್ಟು ಪುಸಕ್ಕನೆ ಜಾರಿ ಕೆರೆಯ ನೀರ್ಗುಂಡಿಗೆ ಬಿದ್ದಳು. ಬಯ್ಯುವ ಆವೇಶದಲ್ಲಿ ಕಾಲಿಟ್ಟದ್ದೂ, ಜಾರಿದ್ದೂ, ಬಿದ್ದದ್ದೂ ಗೊತ್ತಾಗಲಿಲ್ಲ.

"ಮುಳುಗುತ್ತೇನಲ್ಲಾ! ಸಾಯುತ್ತೇನೆ! ಕಾಪಾಡ್ರೀ!" ಎಂದು ಅರಚಿದಳು.

"ಮುಳುಗುವುದಿಲ್ಲ ಬಿಡೇ! ಕೆರೆ ಅಷ್ಟೇನೂ ಆಳವಿಲ್ಲ. ಕುತ್ತಿಗೆವರೆಗಷ್ಟೇ ಇರೋದು ನೀರು" ಎಂದನು ಗಂಡ.

"ಚಳಿ ತಾಳಲಾರೆನಪ್ಪಾ! ಬೇಗ ಎಳೀರಿ ಮೇಲೇ!" ಎಂದು ಹೆಂಡತಿ ಚಡಪಡಿಸುತ್ತಾ ಕೂಗಿದಳು.

"ಅದಕ್ಕೆಲ್ಲಿ ಸಮಯ? ಪಟ್ಟಿಯಲ್ಲಿ ನಾನು ಮಾಡುವ ಕೆಲಸ ಇನ್ನೂ ತುಂಬಾ ಇವೆ. ಇದಂತೂ ಪಟ್ಟಿಯಲ್ಲಿಲ್ಲದ ಕೆಲಸ" ಎಂದನು ಗಂಡ.

"ನನ್ನನ್ನು ಮೇಲೆತ್ತೀ! ಅಯ್ಯಯ್ಯೋ! ಜಿಗಣೆ ಗಳು! ರಕ್ತ ಹೀರುತ್ತೋಯ್! " ಎಂದು ಹೆಂಡತಿ ಕೆಟ್ಟದಾಗಿ ಕಿರಿಚಿದಳು. "ನಾವು ಮಾಡಿಕೊಂಡ ಏರ್ಪಾಡು ನಿನಗೆ ಮರೆಯಿತೇ? ಬೇಕಾದರೆ ಆ ಪಟ್ಟಿಯನ್ನು ಓದಿ ತೋರಿಸುತ್ತೇನೆ, ಇರು" ಎಂದು ಗಂಡನು ಓಡಿಹೋಗಿ ಪಟ್ಟಿಯನ್ನು ತಂದು ಅವಳ ಇದಿರಿನಲ್ಲಿ ಓದಲು ತೊಡಗಿದನು.

ಹೆಂಡತಿ ಚಳಿಯಿಂದ, ಜಿಗಣೆಗಳ ಭಯದಿಂದ ನಡುಗುತ್ತ, ಹೀನ ಸ್ವರದಿಂದ, "ನಾನು ಸಾಯ ಬೇಕಂತ ಇದ್ದೀರಾ? ಆ ಪಟ್ಟಿಗಿಟ್ಟೀ ಇನ್ನು ಬೇಡವೇ ಬೇಡಾ! ಅದನ್ನು ಈ ಗುಂಡಿಗೆ ಹಾಕಿ ನನ್ನನ್ನು ಎಳೀರಿ, ನಿಮ್ಮ ಪುಣ್ಯ! ಕಾಲು ಕೆಸರಲ್ಲಿ ಸಿಕ್ಕಿ ಕೊಂಡಿದೆ!" ಎಂದು ಮೊರೆಯಿಟ್ಟಳು ಹೆಂಡತಿ.

"ಹಾಗೆ ಹೇಳು ಮತ್ತೆ! ಅದೀಗ ಸರಿ, ಇನ್ನು ನಿನ್ನ ಹೆಣ್ಣು ಕೆಲಸ ನೀನೇ ಮಾಡು! ನನ್ನ ಗಂಡು ಕೆಲಸ ಮಾತ್ರ ನನಗೆ, ಇದಕ್ಕೆ ಒಪ್ಪುವಿಯಾ?" ಎಂದು ಕೇಳಿದನು ಗಂಡ.

"ಹಾಗೇ ಆಗಲೀ!" ಎಂದು ಕೂಗಿದಳು ಹೆಂಡತಿ. ಗಂಡನು ಅವಳನ್ನು ಗುಂಡಿಯಿಂದ ಮೇಲಕ್ಕೆ ಎಳೆದು ಮನೆಯೊಳಗೆ ಕರೆದೊಯ್ದು ಚಳಿಗೆ ಬೆಂಕಿ ಹೊತ್ತಿಸಿದನು. ಆಮೇಲೆ ಹೆಂಡತಿ ಅವನನ್ನು ಬಯ್ಯುತ್ತಿದ್ದಿಲ್ಲ, ಯಾವ ಕೆಲಸವನ್ನೂ ಅವನಿಗೆ ಹೇಳಲೇ ಇಲ್ಲ. ಅವನು ತನ್ನ ಕೆಲಸ ಮಾತ್ರ ಮಾಡಿಕೊಂಡಿದ್ದನು. ಅವಳು ಹೆಂಡತಿ ಯಾದವಳು ಹೇಗಿರಬೇಕೋ ಹಾಗೇ ಇದ್ದಳು.





# ಮಾನವಜನ್ಮ

ಬ್ರಹ್ಮದತ್ತನು ಕಾಶೀ ರಾಜ್ಯವನ್ನು ಪರಿಪಾಲಿಸಿಕೊಂಡಿದ್ದ ಕಾಲದಲ್ಲಿ, ಬೋಧಿಸತ್ವನು ಮಗಧ ರಾಜ್ಯದಲ್ಲಿ ಒಬ್ಬ ಬಡ ಮನುಷ್ಯನಾಗಿ ಹುಟ್ಟಿ, ಮಗಧ ರಾಜನ ಪರಿವಾರದಲ್ಲಿ ಒಬ್ಬ ಸೇವಕನಾಗಿ ಸೇರಿ ಕಾಲ ಕಳೆಯುತ್ತಿದ್ದನು.

ಮಗಧ ದೇಶಕ್ಕೂ ಅಂಗ ದೇಶಕ್ಕೂ ಮಧ್ಯದಲ್ಲಿ ಚಂಪಾನದಿ ಪ್ರವಹಿಸಿಕೊಂಡಿದ್ದಿತು. ಆ ನದಿಯಲ್ಲಿ ಅನೇಕ ಗುಂಡಿಗಳೂ ಸುಳಿಗಳೂ ಇದ್ದವು. ನದಿಯ ತಳಭಾಗದಲ್ಲಿ ನಾಗರಾಜ್ಯವಿದ್ದಿತು. ಚಂಪೇಯ್ಯನೆಂಬವನು ಆ ರಾಜ್ಯದ ರಾಜನಾಗಿದ್ದನು.

ಸಾಧಾರಣವಾಗಿ ಮಗಧ ರಾಜ್ಯಕ್ಕೂ, ಅಂಗ ರಾಜ್ಯಕ್ಕೂ ಯಾವಾಗಲೂ ಹಗೆಯೇ ಇದ್ದುದರಿಂದ, ಏನೋ ಒಂದು ಕಾರಣದಿಂದ ಆಗಾಗ ಯುದ್ಧವಾಗುತ್ತಿತ್ತು. ಹಾಗೆ ಒಂದು ಸಾರಿ ಯುದ್ಧವು ನಡೆಯುತ್ತಿರಲು, ಮಗಧ ರಾಜನು ಸೋತು ಹೋದನು. ತೀರಾ ಸೋತೆನೆಂದು ತಿಳಿದಕೂಡಲೇ ಅವನು ತನ್ನ ಕುದುರೆಯ ಮೇಲೆ ಕುಳಿತು ತಪ್ಪಿಸಿಕೊಂಡು ಓಡಿಹೋದನು. ಓಡುತ್ತಾ ಚಂಪಾ ನದಿಯ ಬಳಿಗೆ ಬಂದು, ಭೂಮಿಯಲ್ಲಿದ್ದು ಶತ್ರುವಿನ ಕೈಗೆ ಸಿಕ್ಕಿ ಸಾಯುವುದಕ್ಕಿಂತಲೂ, ಆತ್ಮಹತ್ಯ ಮಾಡಿಕೊಳ್ಳುವುದೇ ಒಳ್ಳೆಯದೆಂದುಕೊಂಡು, ತನ್ನ ಕುದುರೆಯೊಂದಿಗೆಯೇ ನದಿಯೊಳಗೆ ಹಾರಿದನು. ಮಗಧ ರಾಜನೊಂದಿಗೆ ಕುದುರೆ ನದಿಯ ಅಡಿಯಲ್ಲಿರುವ ನಾಗರಾಜ್ಯಕ್ಕೆ ಹೋಗಿ, ನಾಗರಾಜನ ಸಭಾಸ್ಥಾನದೊಳಗೆ ನುಸುಳಿತು.

ನಾಗರಾಜನು ತನ್ನ ಸಿಂಹಾಸನದಿಂದ ಧಿಗ್ಗನೆದ್ದು ಮಗಧ ರಾಜನಿಗೆ ಆದರಪೂರ್ವಕವಾದ ಸ್ವಾಗತವನ್ನು ಕೊಟ್ಟು, ಉಪಚರಿಸಿ, ಅವನ ಕಥೆಯನ್ನೆಲ್ಲಾ ಕೇಳಿ ತಿಳಿದುಕೊಂಡನು.

“ಸರಿಬಿಡಿರಿ. ನಡೆದು ಹೋದುದನ್ನು ನೆನೆದು ಚಿಂತಿಸಬೇಡಿರಿ. ಅಂಗರಾಜನೊಂದಿಗೆ ನಡೆದ ಯುದ್ಧದಲ್ಲಿ ನಿಮಗೆ ವಿಜಯವಾಗುವ ಹಾಗೆ ನಾನು ಸಹಾಯ ಮಾಡಬಲ್ಲೆನು” ಎಂದು ನಾಗರಾಜನು ತನ್ನ ಅತಿಥಿಗೆ ಮಾತು ಕೊಟ್ಟನು.

ಅದರಂತೆ ಮಗಧ ರಾಜನಿಗೂ ಅಂಗರಾಜನಿಗೂ ಮತ್ತೆ ಯುದ್ಧವು ತೊಡಗಿತು. ನಾಗರಾಜನು ಮಗಧ ರಾಜನಿಗೆ ಸಹಾಯ ಮಾಡಿದುದರಿಂದ, ಮಗಧ ರಾಜನ ಕೈಯಲ್ಲಿ ಅಂಗರಾಜನು ಸತ್ತು

ಹೋದನು. ಮಗಧ ರಾಜನು ಎರಡು ದೇಶಗಳಿಗೂ ರಾಜನಾಗಿ ಮಹಾ ವೈಭವದಿಂದ ಪರಿಪಾಲನೆ ಮಾಡತೊಡಗಿದನು.

ಇದರಿಂದಾಗಿ ಮಗಧ ರಾಜನಿಗೂ, ನಾಗರಾಜನಿಗೂ ಒಳ್ಳೆಯ ಮೈತ್ರಿ ಏರ್ಪಟ್ಟಿತು. ಮಗಧ ರಾಜನು ಪ್ರತಿ ವರ್ಷವೂ ಒಂದು ದಿನ ಸಪರಿವಾರನಾಗಿ ಚಂಪಾನದೀ ತೀರಕ್ಕೆ ಹೋಗುತ್ತಿದ್ದನು. ಆ ದಿನ ನಾಗರಾಜನು ಅತ್ಯಂತ ವೈಭವದೊಂದಿಗೆ ನದಿಯಿಂದ ಮೇಲೆ ಬಂದು, ಮಗಧ ರಾಜನು ಕೊಟ್ಟ ಬಹುಮಾನಗಳನ್ನು ಸ್ವೀಕರಿಸುತ್ತಿದ್ದನು. ಇದು ನೋಡುವವರಿಗೊಂದು ಅದ್ಭುತ ದೃಶ್ಯವಾಗಿತ್ತು.

ಮಗಧ ರಾಜನ ಪರಿವಾರದಲ್ಲಿ ಒಬ್ಬ ಭೃತ್ಯನಾಗಿರುವ ಬೋಧಿಸತ್ವನು ವರ್ಷವರ್ಷವೂ ನಾಗರಾಜನ ವೈಭವವನ್ನು ನೋಡುತ್ತಾ ಇದ್ದನು. ಕೊನೆಗೆ ಅವನು ಸಾಯುವ ಕ್ಷಣದಲ್ಲಿ ಮನಸ್ಸು ಪೂರಾ ನಾಗರಾಜನ ವೈಭವವೇ ಮೂರ್ತಿಮಂತವಾಗಿದ್ದ ಕಾರಣದಿಂದ, ನಾಗರಾಜನು ಸತ್ತುಹೋದ ಏಳನೇ ದಿನದಲ್ಲಿ ಬೋಧಿಸತ್ವನೇ ನಾಗರಾಜನಾಗಿ ಹುಟ್ಟಿದನು.

ಆದರೆ ಕಳೆದ ಜನ್ಮದಲ್ಲಿ ಅವನು ಪುಣ್ಯಾತ್ಮನಾಗಿದ್ದ ಕಾರಣ, ನಾಗಲೋಕದ ಜನ್ಮದಲ್ಲಿ ತನಗೆ ಬಂದ ಹಾವಿನ ಶರೀರವನ್ನು ನೋಡಿದ ಕೂಡಲೇ ಬಹಳ ಅಸಹ್ಯವೆನಿಸಿತು. ನಾಗರಾಜನ ಐಶ್ವರ್ಯದ ಮೇಲೆ ಆಶೆಪಟ್ಟುದಕ್ಕೆ ಈಗ ಪಶ್ಚಾತ್ತಾಪಪಡತೊಡಗಿದನು.

ಕಡೆಗೆ ಆತ್ಮಹತ್ಯ ಮಾಡಿಕೊಂಡು ಆ ಜನ್ಮದಿಂದ ಮುಕ್ತನಾಗುವ ಆಲೋಚನೆಯಿಂದ ಅದಕ್ಕೆ ಸಿದ್ಧನಾದ ಸಮಯದಲ್ಲಿ, ಆ ಸ್ಥಳಕ್ಕೆ ಸುಮನ ಎಂಬ ನಾಗಕನ್ಯೆ ತನ್ನ ಗೆಳತಿಯರೊಂದಿಗೆ ಬಂದು ಅವನನ್ನು ನೋಡಿ ಪ್ರಣಾಮ ಮಾಡಿದಳು.

ಸುಮನಳನ್ನು ನೋಡಿದ ಕೂಡಲೇ ಬದುಕುವ ಆಶೆ ಚೇತರಿಸಿತು. ನಾಗರಾಜನು ಆತ್ಮಹತ್ಯ ಮಾಡಿಕೊಳ್ಳುವ ಪ್ರಯತ್ನವನ್ನು ಬಿಟ್ಟು, ಅವಳನ್ನು ಮದುವೆ ಮಾಡಿಕೊಂಡು ನಾಗಲೋಕವನ್ನು ಪರಿಪಾಲನೆ ಮಾಡತೊಡಗಿದನು.



ಆದರೆ ಬೇಗದಲ್ಲೇ ಅವನಿಗೆ ತಾನು ವ್ರತೋಪವಾಸಗಳನ್ನು ಆಚರಿಸಿ ಪುಣ್ಯ ಸಂಪಾದಿಸಬೇಕೆಂದು ತೋರಿತು. ಅದಕ್ಕಾಗಿ ಅವನು ಯಾರಿಗೂ ತಿಳಿಯದಂತೆ ಮಾನವರು ವಾಸ ಮಾಡುವ ಭೂಲೋಕಕ್ಕೆ ಹೋಗಲು ನಿಶ್ಚಯಿಸಿದನು. ಅದರಂತೆ ಉಪವಾಸದ ದಿನಗಳು ಬಂದ ಕೂಡಲೇ ಅವನು ತನ್ನ ಭವನದಿಂದ ಹೊರಟು ಮಾನವ ಲೋಕಕ್ಕೆ ಬಂದು, ಒಂದು ರಾಜ ಬೀದಿಯ ಬದಿಯಲ್ಲಿದ್ದ ಇರುವೆಗಳ ಹುತ್ತದ ಮೇಲೆ ಸುತ್ತಿ ಬಿದ್ದುಕೊಂಡು, "ನನ್ನನ್ನು ಯಾವ ಗರುಡ ಪಕ್ಷಿಯಾದರೂ ಎತ್ತಿಕೊಂಡು ಹೋಗಲಿ! ಯಾವ ಹಾವಾಡಿಗನಾದರೂ ಹಿಡಿದುಕೊಳ್ಳಲಿ! ನನ್ನಿಂದ ಯಾರಿಗಾದರೂ ಪ್ರಯೋಜನವಾಗಲಿ!" ಎಂದುಕೊಳ್ಳುತ್ತಿದ್ದನು.

ತನ್ನ ಇಷ್ಟದಂತೆ ಆಡಿಸಿ ಪ್ರದರ್ಶನ ಮಾಡತೊಡಗಿದನು. ಹಾವೂ ಅವನ ಇಷ್ಟದಂತೆ ಆಡಬೇಕಾಯಿತು.

ಇದನ್ನು ನೋಡಲು ಅನೇಕ ಗ್ರಾಮಸ್ಥರು ಕೂಡಿದರು. ಹಾವಿನ ಚಿತ್ರವಿಚಿತ್ರವಾದ ಆಟಗಳಿಂದ ಅವರೆಲ್ಲಾ ಬಹಳ ಸಂತೋಷಪಟ್ಟು, ಬ್ರಾಹ್ಮಣ ಯುವಕನಿಗೆ ಹಣವನ್ನೂ, ಇತರ ಬೆಲೆ ಬಾಳುವ ಬಹುಮಾನಗಳನ್ನೂ ಕೊಟ್ಟರು.

"ಈ ಕುಗ್ರಾಮದಲ್ಲಿಯೇ ಇಷ್ಟು ಹಣ ಬಂತೆಂದರೆ, ಪಟ್ಟಣಗಳಲ್ಲಿ ಹಾವನ್ನು ಆಡಿಸಿದರೆ ಇನ್ನೆಷ್ಟು ಹಣ ಬರಬೇಡ!" ಎಂದು ಬ್ರಾಹ್ಮಣ ಯುವಕನಿಗೆ ಆಶೆ ಎದ್ದಿತು.

ಅವನು ಹಾವಿನ ಬುಟ್ಟಿಯನ್ನು ಎತ್ತಿಕೊಂಡು ಗಾಡಿಯಲ್ಲಿ ನಗರದ ಕಡೆಗೆ ಪ್ರಯಾಣ ಮಾಡುತ್ತ, ಒಂದು ತಿಂಗಳಲ್ಲಿ ನಗರವನ್ನು ತಲಪಿದನು.

ಈ ಒಂದು ತಿಂಗಳವರೆಗೂ ನಾಗರಾಜನು ತೀವ್ರ ಉಪವಾಸದಲ್ಲಿದ್ದನು. ಬ್ರಾಹ್ಮಣ ಯುವಕನು ಹಾಕಿದ ಕಪ್ಪೆಗಳನ್ನು ಮುಟ್ಟಲೇ ಇಲ್ಲ.

"ನಾನು ಆಹಾರವನ್ನು ಸ್ವೀಕರಿಸುತ್ತಾ ಇದ್ದರೆ, ನನಗೆ ಈ ಬುಟ್ಟಿಯೊಳಗೆ ಮಂತ್ರಶಕ್ತಿಯುಳ್ಳವನಾದ ಈ ಯುವಕನ ಹತ್ತಿರ ಸೆರೆವಾಸ ತಪ್ಪುವಂತಿಲ್ಲ" ಎಂದು ನಾಗರಾಜನಿಗೆ ಗೊತ್ತಾಗಿತ್ತು.

ಬ್ರಾಹ್ಮಣ ಯುವಕನು ನಾಗರಾಜನನ್ನು ಕಾಶೀನಗರದ ಸಮೀಪವಿರುವ ಅನೇಕ ಗ್ರಾಮಗಳಲ್ಲಿ ಆಡಿಸಿ, ಅಲ್ಲಲ್ಲಿಯ ಜನರಿಂದ ಅಪಾರ ಹಣವನ್ನು ಸಂಪಾದಿಸಿದನು.

ಈ ಹಾವು ಮಾಡುವ ವಿಶೇಷ ವಿನೋದದ ಆಟವನ್ನು ಕುರಿತ ಸಮಾಚಾರವು ಕಾಶೀರಾಜನ ಕಿವಿಯವರೆಗೆ ಹೋಯಿತು. ಅವನು ಬ್ರಾಹ್ಮಣ ಯುವಕನನ್ನು ತನ್ನ ಬಳಿಗೆ ಕರೆಯಿಸಿ, ಹಾವಿನ ಆಟಕ್ಕೆ ಏರ್ಪಾಡು ಮಾಡಿಸಿದನು.

ಇಷ್ಟರಲ್ಲಿ ನಾಗಲೋಕದಲ್ಲಿ ಏನಾಯಿತೆಂದರೆ, ಒಂದು ತಿಂಗಳವರೆಗೂ ತನ್ನ ಗಂಡನು ಮನೆಗೆ ಬಾರದಿರುವುದನ್ನು ನೋಡಿ ಸುಮನಳು, ಏನೋ ನಡೆದಿದೆ ಎಂದು ಹೆದರಿ ನಿಜವನ್ನು ತಿಳಿಯಲು



ಕೊಳದ ಬಳಿಗೆ ಹೋದಳು, ಕೊಳದ ನೀರು ಕೆಂಪಗೆ ರಕ್ತವರ್ಣವಾಗಿ ಕಾಣುತ್ತಿದ್ದಿತು. ಯಾವನೋ ಹಾವಾಡಿಗನು ತನ್ನ ಗಂಡನನ್ನು ಹಿಡಿದುಕೊಂಡಿರುವನೆಂದು ಸುಮನಳಿಗೆ ಗೊತ್ತಾಯಿತು. ಅವಳು ತನ್ನ ಗಂಡನನ್ನು ಹುಡುಕುತ್ತಾ ಹೊರಟು, ದಾರಿಯಲ್ಲಿ ಅಲ್ಲಲ್ಲಿ ವಿಚಾರಿಸುತ್ತ, ಸುಳಿವು ತಿಳಿದು ಬೇಗದಲ್ಲೇ ಕಾಶೀ ನಗರಕ್ಕೆ ಬಂದಳು.

ಹಾಗೆ ಅವಳು ಹುಡುಕುತ್ತಾ ಬ್ರಾಹ್ಮಣ ಯುವಕನು ಹಾವನ್ನು ಆಡಿಸುವ ಸ್ಥಳಕ್ಕೇ ಬಂದಳು. ರಾಜನೂ ಅನೇಕ ಮಂದಿ ಪ್ರಜೆಗಳೂ ಆಟದ ವಿನೋದವನ್ನು ನೋಡುತ್ತಾ ಇದ್ದರು. ಅಲ್ಲಿ ತನ್ನ ಹೆಂಡತಿಯನ್ನು ನೋಡಿದ ಕೂಡಲೇ ನಾಗರಾಜನು ನಾಚಿ ಮುದುಡಿ ಸರಸರನೆ ಬುಟ್ಟಿಯೊಳಗೆ ತೂರಿ ಅಡಗಿದನು.

ಆಗ ಸುಮನಳು ಮಾನವಸ್ತ್ರೀ ರೂಪವನ್ನು ಧರಿಸಿ, ರಾಜನ ಬಳಿಗೆ ಹೋಗಿ, ಕೈ ಮುಗಿದು "ಮಹಾಪ್ರಭೂ ! ನನಗೆ ಪತಿಭಿಕ್ಷೆ ಕೊಡಬೇಕು" ಎಂದು ಬೇಡಿದಳು.

ಅಷ್ಟರಲ್ಲಿ ಹಾವು ಕೂಡಾ ಬುಟ್ಟಿಯೊಳಗಿನಿಂದ ಹೊರಗೆ ಬಂದು, ಎಲ್ಲರೂ ನೋಡುತ್ತಿದ್ದ ಹಾಗೆ, ಸುಂದರನಾದೊಬ್ಬ ನವಯುವಕನ ರೂಪವನ್ನು ತಾಳಿ ನಿಂತಿತು.

ಕಾಶೀರಾಜನು ಮುದ್ದಾದ ಆ ನಾಗದಂಪತಿಗಳನ್ನು ನೋಡಿ ಸಂತೋಷಪಡುತ್ತ, ಅವರನ್ನು ಒಂದು ವಾರದವರೆಗೆ ಅತಿಥಿಗಳಾಗಿ ಉಪಚರಿಸಿಕೊಂಡಿದ್ದನು. ಆಮೇಲೆ ಅವರ ಜತೆಯಲ್ಲಿ ತಾನು ಕೂಡಾ ತನ್ನ ಪರಿವಾರದೊಂದಿಗೆ ನಾಗಲೋಕಕ್ಕೆ ಹೊರಟು ಹೋದನು.

ನಾಗಲೋಕದ ಐಶ್ವರ್ಯವನ್ನೂ, ಅಂದಚಂದಗಳನ್ನೂ, ವೈಭವವನ್ನೂ ನೋಡಿ ಕಾಶೀರಾಜನಿಗೆ ಹೇಳಲಾಗದಷ್ಟು ಆನಂದವಾಯಿತು. ಆಶ್ಚರ್ಯಕ್ಕೆ ಮೇರೆಯೇ ಇರಲಿಲ್ಲ.

"ಇಷ್ಟೊಂದು ವೈಭವದಲ್ಲಿ ಓಲಾಡಿಕೊಂಡಿರುವ ನೀವು, ಹಾವಿನ ರೂಪದಲ್ಲಿ ಇರುವೇ ಹುತ್ತದಲ್ಲಿ ಹಾಗೆ ಸುತ್ತಿಕೊಂಡು ಮಲಗಿರಲು ಕಾರಣವೇನು?" ಎಂದು ಕಾಶೀರಾಜನು ನಾಗರಾಜನನ್ನು ಕೇಳಿದನು.

"ಅಯ್ಯಾ, ಇಲ್ಲಿ ಎಷ್ಟೇ ವೈಭವವಿದ್ದರೂ, ಜನ್ಮರಾಹಿತ್ಯ ಪಡೆಯುವ ಸೌಕರ್ಯ ನಿಮ್ಮ ಮಾನವ ಲೋಕದಲ್ಲಿ ಮಾತ್ರವೇ ಇದೆ." ಎಂದು ನಾಗರಾಜನು ಉತ್ತರ ಕೊಟ್ಟನು.

ಈ ಮಾತು ಕೇಳಿ ಕಾಶೀರಾಜನಿಗೆ ಪರಮಾನಂದವಾಯಿತು. ಅವನು ತನ್ನ ರಾಜ್ಯಕ್ಕೆ ಹಿಂದಿರುಗಿ ಹೋಗುವಾಗ, ನಾಗರಾಜನು ಅವನಿಗೆ ಅಪಾರವಾದ ಧನವನ್ನು ಕೊಟ್ಟು ಕಳುಹಿಸಿದನು.






# ಕೃಷ್ಣಕುಮಾರಿ

ರಾಜಾಸ್ಥಾನದ ಉದಯಪೂರ್ ರಾಜ್ಯವು, ಮಹಾರಾಣಾರ ಕಾಲದಲ್ಲಿ ಅತಿ ವೈಭವದಿಂದ ಬೆಳಗಿಕೊಂಡಿದ್ದಿತು. ಮಹಾರಾಣಾ ಭೀಮ್ ಸಿಂಗ್ ಪರಿಪಾಲಿಸಿಕೊಂಡಿದ್ದಾಗ, ಉದಯಪೂರ್ ಸೌಂದರ್ಯ ನಗರವಾಗಿ ಅಭಿವೃದ್ಧಿಗೇರಿತು.

ಆ ಸುಂದರವಾದ ನಗರದಲ್ಲಿ ಮಹಾರಾಣಾನ ಕುಮಾರಿ ಕೃಷ್ಣಕುಮಾರಿ ಸೌಂದರ್ಯದ ರಾಶಿಯಾಗಿ ಹೆಸರು ಪಡೆದಳು. ಅವಳ ಸೌಂದರ್ಯಕ್ಕೆ ಮುಗ್ಧರಾಗಿ ಎಲ್ಲರೂ ಅವಳನ್ನು 'ರಾಜಾಸ್ಥಾನದ ಕುಸುಮ' ಎನ್ನುತ್ತಿದ್ದರು. ಅವಳ ಮಧುರ ಮಾತು ಮಿದುಗುಣಗಳು ಉದಯಪೂರ್ ಪ್ರಜೆಗಳಿಗೆ ಬಹಳ ಸಂತೋಷಪ್ರದವಾಗಿತ್ತು.





ಜಯಪೂರ್ ಪಾಲಕನಾದ ಜಗತ್ಸಿಂಗ್ ಆ ಯುವರಾಣಿಯನ್ನು ಮದುವೆಯಾಗಲು ಆಶಿಸಿ, ತನ್ನ ದೂತನನ್ನು ಮಹಾರಾಣಾನ ಬಳಿಗೆ ಕಳುಹಿಸಿದನು. ಬೇಗದಲ್ಲೇ ತನ್ನ ನಿರ್ಣಯವನ್ನು ತಿಳಿಸುವೆನೆಂದು ಹೇಳಿ ಮಹಾರಾಣಾನು ಜಗತ್ಸಿಂಗನ ದೂತನನ್ನು ಕಳುಹಿಸಿದನು. ಮಗಳ ಮದುವೆಯ ವಿಷಯವನ್ನು ರಾಣಿಯೊಂದಿಗೂ, ಮಂತ್ರಿಗಳೊಂದಿಗೂ ಆಲೋಚಿಸಿ ವಿವಾದಿಸಿ ನಿಶ್ಚಯಿಸಬೇಕೆಂದು ಮಹಾರಾಣಾನ ಉದ್ದೇಶ.



ಅಷ್ಟರಲ್ಲಿ ಜಗತ್ಸಿಂಗನಿಗೂ ಮಾರ್ವಾರ್ ಪಾಲಕನಾದ ಮಾನ್‌ಸಿಂಗನಿಗೂ ಯುದ್ಧವು ತೊಡಗಿತು. ಯುದ್ಧದಲ್ಲಿ ಜಗತ್ಸಿಂಗ್ ಸೋತು ಹೋದನೆಂದು ಮಾನ್‌ಸಿಂಗ್ ಪ್ರಕಟಪಡಿಸಿದನು. ಆದರೆ ಜಗತ್ಸಿಂಗ್ ಸೋಲನ್ನು ಒಪ್ಪಿಕೊಳ್ಳಲಿಲ್ಲ. ಅದರ ಪರಿಣಾಮವಾಗಿ ಅವರಿಬ್ಬರೂ ಬದ್ಧ ಶತ್ರುಗಳಾದರು.

ಯುದ್ಧವು ಮುಗಿದ ಮೇಲೆ ಮಾನ್‌ಸಿಂಗ್‌ನ ಪ್ರತಿನಿಧಿ ಉದಯಪೂರ್ ಮಹಾರಾಣಾನ ಬಳಿಗೆ ಹೋಗಿ, "ಯುವರಾಣಿ ಕೃಷ್ಣಕುಮಾರಿಯನ್ನು ನಮ್ಮ ರಾಜ ಮಾನ್‌ಸಿಂಗ್ ವಿವಾಹ ಮಾಡಿಕೊಳ್ಳಬೇಕೆಂದು ಆಶಿಸುತ್ತಾರೆ. ಯುದ್ಧದಲ್ಲಿ ಜಯಿಸಿದ ವೀರರಾದ ನಮ್ಮ ರಾಜರಿಗೆ ನಿಮ್ಮ ಕುಮಾರಿಯನ್ನು ಕೊಡಲು ನೀವು ಸಂತೋಷದಿಂದ ಒಪ್ಪಿಕೊಳ್ಳುವಿರೆಂದು ನಂಬುತ್ತೇವೆ" ಎಂದನು.





ಇದರಿಂದ ಮಹಾರಾಣಾನೂ, ರಾಣಿಯೂ ಸಂದಿಗ್ಧದಲ್ಲಿ ಬಿದ್ದರು. ಜಗತ್ಸಿಂಗ್, ಮಾನ್‌ಸಿಂಗ್ ಇಬ್ಬರೂ ಸಹ ಬಲಿಷ್ಠರೇ. ಆದುದರಿಂದ ತಮ್ಮ ಕುಮಾರಿಯನ್ನು ಯಾರಿಗೆ ಕೊಟ್ಟರೂ ಎರಡನೆಯವರೊಂದಿಗೆ ಉದಯಪೂರಕ್ಕೆ ವಿರೋಧವು ತಪ್ಪದು. ಆಗಿನ ಉದಯಪೂರ್ ಯಾವ ಒಬ್ಬರನ್ನಾದರೂ ಎದುರಿಸುವ ಸ್ಥಿತಿಯಲ್ಲಿ ಇರಲಿಲ್ಲ.

ಮಾನ್‌ಸಿಂಗನಿಗೆ ಅಮೀರ್‌ಖಾನ್ ಎಂಬ ಮಿತ್ರನಿದ್ದನು. ಅವನು ಸಮಯ ದೊರಕಿದಾಗಲೆಲ್ಲಾ ಮಾನ್‌ಸಿಂಗ್ ಉದಯಪೂರ್ ಯುವರಾಣಿಯನ್ನು ಮದುವೆಯಾಗಬೇಕೆಂದು ಆಗಾಗ ಹೇಳಿ ಹುರಿಗೊಳಿಸುತ್ತಿದ್ದನು. ಆ ಪ್ರೋತ್ಸಾಹದಿಂದ ಮಾನ್‌ಸಿಂಗ್ ಮಹಾರಾಣಾನ ಬಳಿಗೆ ಆಗಾಗ ದೂತರನ್ನು ಕಳುಹಿಸಿ ಮದುವೆಗೆ ಒತ್ತಾಯಪಡಿಸತೊಡಗಿದನು.





ಕಡೆಗೊಮ್ಮೆ ಮಾನ್‌ಸಿಂಗನ ಪರವಾಗಿ ಅಮೀರ್‌ಖಾನ್ ಸ್ವತಃ ಮಹಾರಾಣಾನ ಬಳಿಗೆ ಹೋಗಿ "ಮಾನ್‌ಸಿಂಗರಿಗೆ ನಿಮ್ಮ ಕುಮಾರಿಯನ್ನು ಕೊಡದೆಹೋದರೆ ಉದಯಪೂರನ್ನು ನಾಶ ಮಾಡಿಬಿಡುತ್ತೇವೆ. ನಿಮ್ಮ ಕುಮಾರಿಯನ್ನು ನೀವು ಕೊಂದರೂ ಚಿಂತೆ ಇಲ್ಲ. ಅವಳನ್ನು ಜಗತ್ಸಿಂಗನಿಗೆ ಮಾತ್ರ ಕೊಡಕೂಡದು" ಎಂದು ಎಚ್ಚರಿಕೆ ಕೊಟ್ಟನು.

ತನ್ನ ತಂದೆತಾಯಿಗಳಿಗೆ ಬಂದ ಸಂಕಟದ ಪರಿಸ್ಥಿತಿಯನ್ನು ನೋಡಿ ಕೃಷ್ಣಕುಮಾರಿ ಬಹಳ ವಿಷಾದಗೊಂಡಳು. ತನ್ನ ಮೂಲದಿಂದಾಗಿ ಉದಯಪೂರ್ ನಗರವು ನಾಶವಾಗುವುದು ಅವಳಿಗೆ ಇಷ್ಟವಿಲ್ಲ. ಆದರೂ ಅವಳು ಯಾವ ತಪ್ಪೂ ಮಾಡದೆಯೇ ಹೆತ್ತವರು ಕೂಡಾ ಅವಳೊಂದಿಗೆ ಮಾತಾಡುವುದನ್ನು ನಿಲ್ಲಿಸಿಬಿಟ್ಟರು.





ಕೆಲವು ದಿನಗಳು ಕಳೆಯುವುದರೊಳಗೇ ಜಗತ್ಸಿಂಗ್ ಮತ್ತು ಮಾನ್ ಸಿಂಗ್ ಉದಯಪೂರನ್ನು ಹಿಡಿದು ಯುವರಾಣಿಯನ್ನು ಮದುವೆಯಾಗಲು ಹೊರಟರು. ನಗರದೊಳಗೆಲ್ಲಾ ಭಯವು ಆವರಿಸಿಕೊಂಡಿತು. ರಾಜನಿಗೂ ಅವನ ಪರಿವಾರದವರಿಗೂ ಏನು ಮಾಡಬೇಕೆಂಬುದೇ ಗೊತ್ತಾಗಲಿಲ್ಲ.

ಒಂದು ದಿನ ರಾತ್ರಿ ಯುವರಾಣಿ ಮಲಗಿಕೊಂಡಿದ್ದಾಗ, ಮಸಕು ಕತ್ತಲೆಯಲ್ಲಿ, ಕತ್ತಿ ಹಿಡಿದುಕೊಂಡ ಒಬ್ಬನು ತನ್ನ ಬಳಿಗೆ ಬರುವುದನ್ನು ನೋಡಿ "ಅಪ್ಪಾ!" ಎಂದು ಕೂಗಿದಳು. ಕೂಡಲೇ ಆ ವ್ಯಕ್ತಿ ಕತ್ತಿಯನ್ನು ದೂರ ಬಿಸುಟು ಓಡಿಹೋದನು. ಅವನು ಮಹಾರಾಣಾನ ಬಂಧುವಾದ ಜವಾನ್‌ದಾಸ್ ಎಂಬವನೇ.





ತನ್ನ ಮರಣ ಮಾತ್ರವೇ ನಗರಕ್ಕೆ ಬಂದ ಅಪಾಯವನ್ನು ತಪ್ಪಿಸುವುದೆಂದು ತಿಳಿದುಕೊಂಡು, ತನ್ನನ್ನು ಕೊಲ್ಲಲು ಹಿರಿಯರು ಜವಾನ್‌ದಾಸನನ್ನು ನಿಯೋಗಿಸಿದ್ದಾರೆಂದು ಯುವರಾಣಿಗೆ ಗೊತ್ತಾಯಿತು. ಕೂಡಲೇ ಅವಳು ಸೇವಕಿಯನ್ನು ವಿಷ ತರಲು ಹೇಳಿದಳು ವಿಷಾದ ತುಂಬಿದ ನಗುವಿನೊಂದಿಗೆ ಅವಳು ವಿಷವನ್ನು ಕುಡಿದು, ಹಾಗೆಯೇ ಪ್ರಾಣಬಿಟ್ಟು, ತನ್ನ ಕುಟುಂಬವನ್ನೂ ರಕ್ಷಿಸಿದಳು.



# ದುಡುಕುತನ

ಬಿಸ್ರಾ ನಗರದಲ್ಲಿ ಅಬ್ದುಲ್‌ರಜಾಕ್ ಎಂಬ ದೊಡ್ಡ ವರ್ತಕನಿದ್ದನು. ಅವನಿಗೆ ಇಬ್ಬರು ಅವಳಿ ಜವಳಿ ಕುಮಾರರಿದ್ದರು. ಒಂದು ಸಾರಿ ಅಬ್ದುಲ್‌ರಜಾಕ್ ವ್ಯಾಪಾರದ ಕೆಲಸದಲ್ಲಿ ಸರಕುಗಳೊಂದಿಗೆ ಹಡಗಿನಲ್ಲಿ ಹೊರಟು, ಬಹಳ ಕಾಲ ಪ್ರಯಾಣ ಮಾಡಿದ ಮೇಲೆ ಒಂದು ದ್ವೀಪವನ್ನು ತಲಪಿದನು.

ಅಲ್ಲಿ ಅವನ ಹತ್ತಿರವಿದ್ದ ಸರಕುಗಳಿಗೆ ಒಳ್ಳೆಯ ಗಿರಾಕಿಗಳಿದ್ದುದರಿಂದ ವ್ಯಾಪಾರವು ಒಳ್ಳೆಯ ಲಾಭ ದಾಯಕವಾಗಿ ನಡೆಯಿತು. ಅವನ ಸರಕುಗಳನ್ನು ನೋಡಿ ಸಂತೋಷಪಟ್ಟ ರಾಜನು, ಸ್ವತಃ ಅವನ ಹಡಗಿನ ಬಳಿಗೆ ಬಂದು, ಬೆಲೆ ಬಾಳುವ ಅನೇಕ ವಸ್ತುಗಳನ್ನು ಕೊಂಡುಕೊಂಡನು.

ರಜಾಕ್ ಸಮುದ್ರ ವ್ಯಾಪಾರದಲ್ಲಿ ಅನೇಕ ದ್ವೀಪಗಳನ್ನು ತಿರುಗಿದವನೆಂದು ರಾಜನಿಗೆ ತಿಳಿಯಿತು. ಆದುದರಿಂದ ರಾಜನು ಅವನನ್ನು ತನ್ನ ಭವನಕ್ಕೆ ಆಹ್ವಾನ ಮಾಡಿ, ದೊಡ್ಡ ಔತಣವನ್ನೇರ್ಪಡಿಸಿ, ಅವನ ಮೂಲಕ ಅನೇಕ ದ್ವೀಪಗಳ ವಿಶೇಷಗಳನ್ನು ಕೇಳಿ ತಿಳಿದನು. ರಜಾಕ್ ನಂತಹ ಅನುಭವಜ್ಞನಿಂದ ಹೊಸ ಹೊಸ ವಿಷಯಗಳನ್ನು ತಿಳಿಯಬೇಕೆಂಬ ಕೋರಿಕೆಯುಟಾಯಿತು. ಆ ಕಾರಣದಿಂದ ರಾಜನು ಅವನನ್ನು ಕೆಲವು ತಿಂಗಳವರೆಗೆ ತನ್ನ ಬಳಿಯಲ್ಲಿರು ವಂತೆ ಒತ್ತಾಯ ಮಾಡಿದನು.

ಹೀಗಾಗಿ ತಿಂಗಳುಗಳಲ್ಲ, ಅನೇಕ ವರ್ಷಗಳೇ ಕ್ರಮಿಸಿದುವು. ರಜಾಕ್‌ನ ಹೆಂಡತಿ ತನ್ನ ಗಂಡನು ಎಷ್ಟುಕಾಲವಾದರೂ ಮನೆಗೆ ತಿರುಗಿ ಬಾರದಿರುವು ದನ್ನು ನೋಡಿ ವಿಚಾರಗ್ರಸ್ತಳಾದಳು. ಕಡೆಗೆ ಒಂದು ದಿನ ಸಹನೆ ಮೀರಿ, ತನ್ನ ಇಬ್ಬರು ಕುಮಾರರನ್ನೂ ಕರೆದುಕೊಂಡು ಗಂಡನು ಹೋಗುವುದಾಗಿ ಹೇಳಿದ ದೂರದ ಆ ದ್ವೀಪದ ಕಡೆಗೆ ಹೊರಟಳು.

ಕೆಲವು ದಿನಗಳ ಮೇಲೆ ಅವರು ಪ್ರಯಾಣ ಮಾಡುವ ಹಡಗು ಒಂದು ರೇವು ಪಟ್ಟಣ ತಲಪಿತು. ಆ ರೇವಿಗೆ ರಜಾಕ್ ಇರುವ ದ್ವೀಪದಿಂದ ಒಂದು ಹಡಗು ಬರುತ್ತಿರುವುದೆಂದು ರಜಾಕನ ಹೆಂಡತಿಗೆ ತಿಳಿಯಿತು. ಅವಳು ತನ್ನ ಇಬ್ಬರು ಕುಮಾರ ರನ್ನೂ, ಆ ಹಡಗಿನವರೊಂದಿಗೆ, ಅವರ ತಂದೆಯ ಸಮಾಚಾರವೂ ಕೇಳಿ ಬರುವಂತೆ ಕಳುಹಿಸಿದಳು.

ಅವಳಿ ಜವಳಿ ಕುಮಾರರಿಬ್ಬರೂ ಆ ಹಡಗಿನ ಕಡೆಗೆ ಹೋದರು. ಅದು ಬೇರೆ ಯಾರ ಹಡಗೂ



ಆಗಿರದೆ, ಅವರ ತಂದೆಯ ಹಡಗೇ ಆಗಿತ್ತು. ಅವನು ರಾಜನಿಂದ ಅಪ್ಪಣೆ ಪಡೆದು, ಅವನು ಕೊಟ್ಟ ಕಾಣಿಕೆಗಳೊಂದಿಗೆ ತನ್ನ ದೇಶಕ್ಕೆ ಹಿಂದಿರುಗಿ ಹೊರಟಿದ್ದನು. ಅವಳಿಜವಳಿಗಳು ಆ ಹಡಗಿಗೆ ಹೋದ ಸಮಯದಲ್ಲಿ, ರಜಾಕ್ ತನ್ನ ಹಣದ ಚೀಲ ಕಾಣುವುದಿಲ್ಲವೆಂದು ಕಲಾಸಿಗಳ ಹತ್ತಿರ ಪ್ರಶ್ನಿಸಿ ಕೊಂಡಿದ್ದನು. ಅವನ ಹಣದ ಚೀಲವನ್ನು ಕದ್ದಿದ್ದ ಕಲಾಸಿ, ಹೊಸತಾಗಿ ಹಡಗಿನೊಳಗೆ ಬಂದ ಅವಳಿ ಜವಳಿಗಳನ್ನು ತೋರಿಸಿ, " ಇವರು ಕದಿಯುವುದನ್ನು ನಾನು ನೋಡಿದೆನು " ಎಂದು ಹೇಳಿಬಿಟ್ಟನು.

ರಜಾಕ್ ಅತ್ಯಂತ ಕುಪಿತನಾಗಿ, ಆ ಹುಡುಗರು ತನ್ನ ಮಕ್ಕಳೆಂದು ತಿಳಿಯದೆ, ಅವರಿಬ್ಬರನ್ನೂ ಸಮುದ್ರಕ್ಕೆ ಬಿಸುಡುವಂತೆ ಕಲಾಸಿಗಳಿಗೆ ಆಜ್ಞೆ ಮಾಡಿದನು. ಅವರು ಆ ನಿಮಿಷದಲ್ಲೇ ಅವರಿಬ್ಬ ರನ್ನೂ ಹಡಗಿನ ಮೇಲಿನಿಂದ ಸಮುದ್ರಕ್ಕೆ ಬೀಸಿ ಒಗೆದುಬಿಟ್ಟರು.

ರಜಾಕನ ಹೆಂಡತಿ ಆ ಹಡಗಿಗೆ ಹೋದ ತನ್ನ ಕುಮಾರರು ತಿರುಗಿ ಬಾರದುದನ್ನು ನೋಡಿ ರಾತ್ರಿ ಪೂರಾ ದಿಗಿಲಿನಿಂದಲೇ ಕಳೆದಳು. ಬೆಳಗಾದ ಕೂಡಲೇ ತಾನೇ ಸ್ವತಃ ಆ ಹಡಗಿಗೆ ಹೋದಳು.

ರಜಾಕ್ ಅಕಸ್ಮಾತ್ತಾಗಿ ತನ್ನ ಹೆಂಡತಿಯನ್ನು ನೋಡಿ ಅತ್ಯಾನಂದದಿಂದ ಸಂಭ್ರಮಿಸಿ ಹೋದನು. ಆದರೆ ಆಮೇಲೆ ತಮ್ಮ ಕುಮಾರರ ವಿಷಯ ಬಯಲಾದ ಕೂಡಲೇ ರಜಾಕನಿಗಾದ ದುಃಖವು ತಡೆಯಲಾಗದಂತಾಯಿತು. ರಾತ್ರಿಯಲ್ಲಿ ತಾನು ಸಮುದ್ರಕ್ಕೆ ಎಸೆಯಿಸಿದವರು ತನ್ನ ಕುಮಾರರೆಂದು ತಿಳಿದು ತಲೆಚಚ್ಚಿ ರೋದಿಸಿದನು.

ಆದರೂ ಯಾವುದೋ ಒಂದು ಆಶೆ. ತಮ್ಮ ಕುಮಾರರು ಹೇಗೋ ಒಂದು ವಿಧವಾಗಿ ಬದುಕಿ ದಡ ಸೇರಿರುವರೇನೋ? ಎಲ್ಲಾದರೂ ಇರುವ ರೇನೋ? ಈ ಒಂದು ಶುಷ್ಕವಾದ ಆಶೆ ಆ ಗಂಡ ಹೆಂಡಿರ ಮನಸ್ಸಿನಲ್ಲಿದ್ದಿತು. ಆದುದರಿಂದ ಅನೇಕ ದಿನಗಳವರೆಗೆ ಅನೇಕ ಸಮುದ್ರತೀರ ಪ್ರಾಂತಗಳಲ್ಲಿ ತಮ್ಮ ಕುಮಾರರನ್ನು ಹುಡುಕಾಡಿದರು. ಎಲ್ಲಿಯೂ ಯಾವ ಜಾಡೂ ತಿಳಿಯದೆ ಮನೆಗೆ ಹಿಂದಿರುಗಿ ದುದೂ ಆಯಿತು.

ಕಾಲ ಚಕ್ರವು ಉರುಳುತ್ತಾ ಹೋಗುತ್ತಿದ್ದಿತು. ರಜಾಕ್ ಮತ್ತು ಅವನ ಹೆಂಡತಿ ಯಾವನಾದರೊಬ್ಬ ಹುಡುಗನನ್ನು ದತ್ತಕ್ಕೆ ತೆಗೆದುಕೊಳ್ಳಬೇಕೆಂದು ಆಲೋಚನೆಗೆ ತೊಡಗಿದರು. ಒಂದು ದಿನ ರಜಾಕ್ ಗುಲಾಮರ ಸಂತೆಯಲ್ಲಿ ಒಬ್ಬ ಯುವಕನನ್ನು ಕೊಂಡು ಕೊಂಡು, ಮನೆಗೆ ಕರೆದುಕೊಂಡು ಬಂದನು.

ಅವನ ಹೆಂಡತಿ ಆ ಹುಡುಗನನ್ನು ನೋಡಿದ ಕೂಡಲೇ ಕಿರಿಚಿಕೊಳ್ಳುತ್ತ ಗಂಡನೊಂದಿಗೆ, " ಅಯ್ಯೋ! ನಿಮಗೆ ಗುರುತಾಗಲಿಲ್ಲವೇ? ಇವನು ಬೇರೆ ಯಾರೂ ಅಲ್ಲಾ! ನಮ್ಮ ಮಕ್ಕಳಲ್ಲಿ ಚಿಕ್ಕವನೇ ಇವನು! ನೀವು ಬಹಳ ಕಾಲ ಅಗಲಿದ್ದರಿಂದ

ಗುರುತಾಗಲಿಲ್ಲ." ಎಂದು ಮಗನನ್ನು ಬಾಚಿ ತಬ್ಬಿದಳು. ತಾಯಿಯನ್ನು ನೋಡಿದ ಕೂಡಲೇ, ಮಗನೂ "ಅಮ್ಮಾ!" ಎಂದು ಕಿರಿಚಿದನು.

ರಜಾಕನಿಗಾದ ಸಂತೋಷಕ್ಕೆ ಮೇರೆಯೇ ಇರಲಿಲ್ಲ. ಅವನು ಚಿಕ್ಕವನೊಂದಿಗೆ ಅವನ ಅಣ್ಣನನ್ನು ಕುರಿತು ಕೇಳಿದನು. ಅವನಿಗೆ ಅಣ್ಣನ ಸಮಾಚಾರ ಏನೂ ಗೊತ್ತಿರಲಿಲ್ಲ. ಸಮುದ್ರದಲ್ಲಿ ಬಿದ್ದು ಚಡಪಡಿಸಿ ಕೊಂಡಿದ್ದ ಅವನನ್ನು, ಒಬ್ಬ ಹಡಗಿನವನು ನೋಡಿ ಕಾಪಾಡಿ, ಗುಲಾಮ ವರ್ತಕರಿಗೆ ಮಾರಿದ್ದನಂತೆ.

ಆರು ತಿಂಗಳು ಕಳೆಯುವುದರೊಳಗೆ ತಂದೆಯೂ ಮಗನೂ ಕೆಲವು ವ್ಯಾಪಾರದ ಸರಕುಗಳನ್ನು ಹಡಗಿಗೇರಿಸಿಕೊಂಡು, ಹೊರಟು ಒಂದಾನೊಂದು ದ್ವೀಪವನ್ನು ಸೇರಿದರು. ಚಿಕ್ಕವನು ಆ ದ್ವೀಪವನ್ನು ಆಳುವ ರಾಜನಿಗೆ ಬಹುಮಾನ ಕೊಡಲು ಕೆಲವು ಉತ್ತಮವಾದ ವಸ್ತುಗಳನ್ನು ತೆಗೆದುಕೊಂಡು ರಾಜಭವನದ ಕಡೆಗೆ ಹೊರಟನು.

ಅಲ್ಲಿಯ ರಾಜನು ಆ ಬಹುಮಾನದ ವಸ್ತುಗಳನ್ನು ನೋಡಿ ಬಹಳ ಸಂತೋಷಪಟ್ಟು, ಚಿಕ್ಕವನನ್ನು ಸ್ವಲ್ಪಕಾಲ ತನ್ನ ಅತಿಥಿಯಾಗಿರಬೇಕೆಂದು ಕೇಳಿಕೊಂಡನು. ಈ ವಿಧವಾಗಿ ಅವರಿಬ್ಬರ ನಡುವೆ ಬಹಳ ಸ್ನೇಹವಾಯಿತು. ಅದನ್ನು ನೋಡಿ ರಾಜಪರಿವಾರದಲ್ಲಿ ಕೆಲವರಿಗೆ ಹಿಡಿಸದೆ ಹೋಯಿತು. ಅವರು ಚಿಕ್ಕವನ ಮೇಲೆ ಕೆಡುಕು ತರಲಿಕ್ಕಾಗಿ ದುಸ್ತಂತ್ರ ಮಾಡತೊಡಗಿದರು.

ಒಂದು ದಿನ ಸಾಯಂಕಾಲದ ಹೊತ್ತಿನಲ್ಲಿ ಅಕಸ್ಮಾತ್ತಾಗಿ ರಾಜನಿಗೆ ಏನೋ ರೋಗ ಬಂದಿತು. ಚಿಕ್ಕವನು ಅಲ್ಲಿ ಸೇರಿದ ಕೆಲವೇ ದಿನಗಳಲ್ಲಿ, ರಾಜನ ಉದ್ಯೋಗಸ್ಥರಲ್ಲಿ ಕೆಲವರು ರಾಜನ ಮೇಲೆ ಹಗೆ ಇಟ್ಟುಕೊಂಡು ಸಮಯಕಾಯುವರೆಂದು ಅವನಿಗೆ ಗೊತ್ತಾಯಿತು. ಅಂತಹವರಿಗೆ, ರಾಜನು ರೋಗದಲ್ಲಿ ಬಿದ್ದು ನಿಸ್ಸಹಾಯನಾಗಿರುವುದರಿಂದ ದ್ರೋಹಿ



ಗಳಿಗೆ ರಾಜನನ್ನು ಕೊಲ್ಲುವುದೇನೂ ಕಷ್ಟವಲ್ಲ. ಆದ್ದರಿಂದ ತಾನು ಎಚ್ಚರದಲ್ಲಿರಬೇಕೆಂದುಕೊಂಡನು.

ಈ ಸಂದೇಹದಿಂದ ಚಿಕ್ಕವನು ರಾಜನ ಶಯ್ಯಾಗಾರದ ಬಾಗಿಲಲ್ಲಿ ಕತ್ತಿ ಹಿಡಿದು ನಿಂತುಕೊಂಡು ಬೆಳಗಾಗುವವರೆಗೂ ಕಾವಲುಕಾದನು. ಬೆಳಗಾಗುವಾಗ ರಾಜನಿಗೆ ಸ್ವಲ್ಪ ಮಟ್ಟಿಗೆ ಸ್ವಸ್ಥತೆಯುಂಟಾಗಿತ್ತು.

ಬೆಳಗಾದ ಮೇಲೆ ದ್ರೋಹ ಬುದ್ಧಿಯ ಉದ್ಯೋಗಸ್ಥರು ರಾಜನೊಂದಿಗೆ, ಚಿಕ್ಕವನನ್ನು ತೋರಿಸಿ, "ಈ ವರ್ತಕನ ಮಗನು ರಾತ್ರಿಯಲ್ಲಿ ಬಿಚ್ಚುಗತ್ತಿಯನ್ನು ಹಿಡಿದುಕೊಂಡು ನಿಮ್ಮ ಶಯನಾಗಾರಕ್ಕೆ ಹೋಗುವುದನ್ನು ನಾವು ನೋಡಿದೆವು. ನಮ್ಮನ್ನು ನೋಡಿ ಹೆದರಿ ಸುಮ್ಮನಿದ್ದನೇ ಹೊರತು, ಇಲ್ಲದಿದ್ದರೆ ಅವನು ನಿಮ್ಮ ಕೊಲೆ ಮಾಡುತ್ತಿದ್ದನೆಂದೇ ಹೇಳಬಹುದು, ಈ ದುಷ್ಟನನ್ನು ಈಗಲೇ ಗಲ್ಲಿಗೇರಿಸುವುದು ಒಳ್ಳೆಯದು," ಎಂದು ಹೇಳಿದರು.

ರಾಜನು ಸ್ವಲ್ಪ ಹೊತ್ತು ಆಲೋಚನೆ ಮಾಡಿ, "ದುಡುಕುತನವು ಎಂತಹ ದುರಂತಗಳಿಗೆ ಕಾರಣವಾಗುವುದೆಂದು ನನಗೆ ಗೊತ್ತಿದೆ. ಮೊದಲು ಇವನನ್ನು ಸೆರೆಮನೆಯಲ್ಲಿ ಇಡಿರಿ, ಆಮೇಲೆ ಏನು ಮಾಡಿದರೆ ಚೆನ್ನಾಗಿರುತ್ತದೆಂಬುದನ್ನು ನಾನು ಹೇಳುತ್ತೇನೆ" ಎಂದನು.

ಈ ಸಮಾಚಾರ ವರ್ತಕ ರಜಾಕನಿಗೂ ತಿಳಿಯಿತು. ಅವನು ರಾಜನ ಬಳಿಗೆ ಬಂದು, "ಪ್ರಭೂ, ನನ್ನ ಮಗನು ತಪ್ಪು ಮಾಡಿರುವುದು ನಿಜವೋ ಸುಳ್ಳೋ ಎಂಬುದನ್ನು ಕುರಿತು ವಿಚಾರಣೆ ನಡೆಸಬೇಕೆಂದು ನನ್ನ ಪ್ರಾರ್ಥನೆ. ಅವಸರಪಟ್ಟು ಯಾವ ಕೆಲಸವನ್ನೂ ಮಾಡಿಬಿಡಬಾರದು. ಅದು ಒಂದೊಂದು ಸಾರಿ ಬಹಳ ಕೇಡನ್ನುಂಟುಮಾಡುತ್ತದೆ. ಒಂದು ದುಡುಕುತನದ ಕಾರಣದಿಂದ ನಾನು ಇಡೀ ಜೀವಿತವನ್ನು ದುಃಖದಿಂದ ಕಳೆಯುತ್ತಿದ್ದೇನೆ. ಅದಕ್ಕೆ ವಿಮೋಚನೆಯೇ ಇಲ್ಲ ಪ್ರಭೂ" ಎಂದನು.

ಆ ಮಾತನ್ನು ಕೇಳಿ ರಾಜನು ಆಶ್ಚರ್ಯಪಡುತ್ತ, "ಅದೇನು ನೀವು ಮಾಡಿದ ದುಡುಕುತನ?" ಎಂದು ಕೇಳಿದನು.

"ನನ್ನ ಸ್ವಂತ ಮಗಂದಿರಿಬ್ಬರನ್ನೂ ಸಮುದ್ರಕ್ಕೆ ಎಸೆಯಿಸಿಬಿಟ್ಟೆನು. ಇದನ್ನು ನೀವು ನಂಬುವಿರಾ?" ಎಂದು ರಜಾಕ್ ನಡೆದುದನ್ನೆಲ್ಲಾ ಹೇಳಿದನು.

ರಾಜನು ಸಂತೋಷದಿಂದ ಹೋ ಎಂದು ಕೂಗಿ "ಹಾಗಾದರೆ ನಾನು ಸೆರೆ ಮನೆಯಲ್ಲಿಡಿಸಿದ್ದು ನನ್ನ ಪ್ರೀತಿಯ ತಮ್ಮನನ್ನೇ ಎಂದಾಯಿತು! ಓ ದೇವರೇ! ತಮ್ಮನಾದುದರಿಂದಲೇ ಅವನ ಮೇಲೆ ನನಗೊಂದು ಬಗೆಯ ಮಮತೆಯುಂಟಾದುದೋ!" ಎಂದು ತನ್ನ ತಂದೆಯಾ ರಜಾಕನನ್ನು ಗಾಢವಾಗಿ ಆಲಿಂಗಿಸಿಕೊಂಡನು.

ತನ್ನ ಹಿರಿಯ ಮಗನು ಕೂಡಾ ಬದುಕಿರುವ ಸಂಗತಿಯನ್ನು ತಿಳಿದು ರಜಾಕನಿಗಾದ ಸಂತೋಷ ಹೇಳತೀರದು. ರಾಜನು ಕೂಡಲೇ ತಮ್ಮನನ್ನು ಸೆರೆಮನೆಯಿಂದ ಬರಮಾಡಿಸಿದನು.

ನಡೆದುದೇನೆಂದರೆ, ಸಮುದ್ರದಲ್ಲಿ ಬಿದ್ದ ದೊಡ್ಡವನು ಒಂದು ಮರದ ತುಂಡಿನ ಸಹಾಯದಲ್ಲಿ ಈಜಿ ಪ್ರಾಣ ಉಳಿಸಿಕೊಳ್ಳುತ್ತ, ಈ ದ್ವೀಪದ ತೀರವನ್ನು ಸೇರಿದ್ದನು. ಇಲ್ಲಿಯ ರಾಜನಿಗೆ ಮಕ್ಕಳಿರಲಿಲ್ಲ. ವೃದ್ಧನಾದ ರಾಜನು ದೊಡ್ಡವನನ್ನು ದತ್ತಪುತ್ರನಾಗಿ ಸ್ವೀಕರಿಸಿ, ತನ್ನ ಮರಣದ ಸಮಯದಲ್ಲಿ ಅವನೇ ರಾಜನೆಂದು ಪ್ರಕಟಿಸಿದ್ದನು.

ಈ ರೀತಿಯಾಗಿ ಕಥೆ ಸುಖಾಂತವಾಯಿತು. ಆ ದ್ವೀಪದಲ್ಲಿ ರಜಾಕ್ ತನ್ನ ಹೆಂಡತಿ ಮತ್ತು ಕುಮಾರರೊಂದಿಗೆ ಕೂಡಿಕೊಂಡನು. ಎಲ್ಲರೂ ಬಹಳ ಕಾಲ ಸುಖವಾಗಿದ್ದರು.





# ಹಿರಿಯ ದಿಕ್ಕು

ಒಂದು ಗ್ರಾಮದಲ್ಲಿ ಸಿಂಹಾಚಲನೆಂಬೊಬ್ಬ ಯುವಕನು ಪಟ್ಟಣದಲ್ಲಿರುವ ಗುರುವಯ್ಯನ ಜೀನಸಿನಂಗಡಿಯಲ್ಲಿ ಲೆಕ್ಕ ಬರೆಯುವ ಉದ್ಯೋಗದಲ್ಲಿದ್ದನು. ಅವನಿಗೆ ತಿಂಗಳಿಗೆ ಇನ್ನೂರು ರೂಪಾಯಿಯಷ್ಟೇ ಸಂಬಳ. ಚಿಕ್ಕತನದಲ್ಲೇ ತಂದೆ ತಾಯಿಗಳನ್ನು ಕಳೆದುಕೊಂಡ ಅವನನ್ನು ಚಿಕ್ಕ ತಾಯಿಯಾದ ಮೀನಾಕ್ಷಿ ಪೋಷಿಸಿ ದೊಡ್ಡವನನ್ನಾಗಿ ಮಾಡಿದ್ದಳು. ಅವಳಿಗೆ ಒಬ್ಬಳು ಮಗಳೂ ಇದ್ದಳು. ಮದುವೆಯ ವಯಸ್ಸು ಬಂದ ಮೇಲೆ ಆ ಮಗಳಿಗೆ ಮದುವೆಮಾಡಿ ಅತ್ತೆಯ ಮನೆಗೆ ಕಳುಹಿಸಿ, ತಾನು ಮಾತ್ರ ಸಿಂಹಾಚಲನ ಜತೆಯಲ್ಲೇ ಇದ್ದಳು. ಚಿಕ್ಕಮ್ಮನ ಮೇಲೆ ಅವನಿಗೂ ಭಕ್ತಿ ವಿಶ್ವಾಸ ಗೌರವಗಳಿದ್ದುವು.

ಸಿಂಹಾಚಲನು ಸ್ವಲ್ಪವೂ ಚಂದವುಳ್ಳ ಗಂಡುಮಗನಾಗಿರಲಿಲ್ಲ. ಅದರ ಮೇಲೆ ಅವನ ಸಂಪಾದನೆಯೂ ಎಷ್ಟೆಂದರೆ ಅಷ್ಟೇ. ಹೀಗಿದ್ದರೂ ಅವನ ಮದುವೆ ಮಾತ್ರ ಒಳ್ಳೆಯ ಸುಂದರಿಯಾದ ಲಾವಣ್ಯಳೊಂದಿಗೆ ನಡೆದು ಬಿಟ್ಟಿತ್ತು. ಲಾವಣ್ಯಳ ತಂದೆ ತಾಯಿಯರು ಬಡವರಾಗಿದ್ದುದೇ ಅದಕ್ಕೆ ಕಾರಣ.

ಈ ಮದುವೆಯಾಗುವುದಕ್ಕೆ ಮೊದಲು ಲಾವಣ್ಯಳು ತನ್ನ ಸೌಂದರ್ಯವನ್ನು ನೋಡಿ ಉಬ್ಬಿಕೊಳ್ಳುತ್ತ, ಯಾವ ಜಮೀನ್ದಾರರ ಮಗನೋ ತನ್ನನ್ನು ಮದುವೆ ಮಾಡಿಕೊಳ್ಳುವನೆಂಬ ಕನಸು ಕಾಣುತ್ತಲಿದ್ದವಳು. ಸಿಂಹಾಚಲನೊಂದಿಗೆ ಮದುವೆಯಾಗಲು ಅವಳಿಗೆ ಸ್ವಲ್ಪವೂ ಇಷ್ಟವಿರಲಿಲ್ಲ. ಸಿಂಹಾಚಲನ ಚಿಕ್ಕಮ್ಮ ತನ್ನ ತಂದೆತಾಯಿಯರ ಹತ್ತಿರ ದೊಡ್ಡ ಸಂಖ್ಯೆಯಲ್ಲಿ ವರದಕ್ಷಿಣೆ ಕೇಳಬೇಕೆಂದೂ, ಆ ಮೂಲಕ ಈ ಮದುವೆ ತಪ್ಪಿ ಹೋಗಬೇಕೆಂದೂ ಅವಳು ಅನೇಕ ದೇವರಿಗೆ ನಮಸ್ಕರಿಸಿಕೊಂಡಿದ್ದಳು.

ಆದರೆ ಮೀನಾಕ್ಷಿ ಲಾವಣ್ಯಳ ತಂದೆತಾಯಿಯರ ಹತ್ತಿರ, "ನಮ್ಮಿಂದ ವರದಕ್ಷಿಣೆ ನಗಾನಟ್ಟು ಮುಂತಾದ ಪ್ರಶ್ನೆಯೇ ಬಾರದು. ಈ ಶುಭ ಸಮಯದಲ್ಲಿ ವಿಷಮತೆಗೆ ಕಾರಣವಾಗುವ ಆ ಸಂಗತಿಯನ್ನು ಮರೆತುಬಿಡೋಣ" ಎಂದು ಕಟ್ಟಿಗೆ ಮುರಿದ ಹಾಗೆ ಹೇಳಿಬಿಟ್ಟಿದ್ದಳು.

ಈ ಮಾತು ಕೇಳಿ ಲಾವಣ್ಯಳು ಹತಾಶಳಾದಳು. ಅವಳ ತಂದೆತಾಯಿಯರಿಗೆ ಬಹಳ ಸಂತೋಷವಾಗಿತ್ತು. ಹೀಗಾಗಿ ಲಾವಣ್ಯಳಿಗೆ ಇಷ್ಟವಿಲ್ಲದೆಯೇ

ಎಂ. ಕೆ. ಈಶ್ವರರಾವ್



ಅವಳ ಮದುವೆ ಆಗಿಹೋಯಿತು. ಅದರಿಂದ ಸಂಸಾರಕ್ಕೆ ಬಂದ ದಿನದಿಂದಲೂ ಅವಳು ವರದಕ್ಷಿಣೆ ಕೇಳದೆಹೋದ ಮೀನಾಕ್ಷಿಯನ್ನು ತನ್ನ ಶತ್ರುವಿನ ಹಾಗೆ ನೋಡತೊಡಗಿದಳು.

ಒಂದು ತಿಂಗಳು ಮುಗಿಯುವ ಮೊದಲು ಒಂದು ದಿನ ರಾತ್ರಿ ಲಾವಣ್ಯಳು ಸಿಂಹಾಚಲನೊಂದಿಗೆ, "ನೋಡೀಂದ್ರೆ, ಈ ದಿನಗಳಲ್ಲಿ ಸ್ವಂತ ಅತ್ತೆಯನ್ನೇ ನೋಡುವವರಿಲ್ಲ. ಇಲ್ಲಿ ಈಗ ಈ ಚಿಕ್ಕ ಅತ್ತೆಗೆ ಊಳಿಗ ಮಾಡಲು ಹಚ್ಚಿದ್ದೀರಿ. ಇದು ಯಾರಿಂದಾದೀತು ? ನಿಮ್ಮ ಈ ಚಿಕ್ಕಮ್ಮನನ್ನು ಅವರ ಮಗಳ ಹತ್ತಿರ ಹೋಗಿ ಇರಲಿಕ್ಕೆ ಹೇಳಿಬಿಡಿರಿ. ಈ ಸೇವೆ ನನ್ನಿಂದಾಗದು " ಎಂದಳು.

ಈ ಮಾತು ಕೇಳಿ ಸಿಂಹಾಚಲನು ನೊಂದು ಕೊಂಡು, "ಇದೆಂಥ ಮಾತು ನಿನ್ನದು ? ಚಿಕ್ಕಮ್ಮ ನಮ್ಮ ಮನೆಗೆ ಹಿರಿಯ ದಿಕ್ಕಾಗಿ ಇದ್ದಾಳಲ್ಲವೆ ? ಅದು ನಮಗೆ ಒಳ್ಳೇದು ತಾನೇ ? " ಎಂದನು.

ಗಂಡನ ಉತ್ತರವನ್ನು ಕೇಳಿ ಲಾವಣ್ಯಳು ಕಿನಿಸಿ ಕೊಂಡು, "ನಮ್ಮ ಹೊಟ್ಟೆಗೇ ನಮಗೆ ದಿಕ್ಕಿಲ್ಲದಿರುವಾಗ ಇದೊಂದು ಭಾರವೇಕೆ ? ನಿಮ್ಮದೇನು ಸಮುದ್ರ ವ್ಯಾಪಾರವೇ ? ತಿಂಗಳು ತಿಂಗಳೂ ಬರುವ ಇನ್ನೂರು ರೂಪಾಯಿ ಇಪ್ಪತ್ತು ದಿನಗಳಿಗೂ ಬಾರವು. ಇಂಥಾ ಬರಗಾಲದ ಮನೆಯಲ್ಲಿ ದಂಡ ತಿನಿಯವರನ್ನು ಎಷ್ಟೆಂದು ಪೋಷಿಸಲಾದೀತು ? " ಎಂದಳು.

ಪಕ್ಕದ ಕೋಣೆಯಲ್ಲೇ ಮಲಗಿದ್ದ ಮೀನಾಕ್ಷಿ ನೀರು ಕುಡಿಯಲಿಕ್ಕಾಗಿ ಎಚ್ಚೆತ್ತಿದ್ದಳು. ಅವಳ ಕಿವಿಗೆ ಲಾವಣ್ಯಳ ಮಾತುಗಳು ಬಿದ್ದಿದ್ದುವು. ಅವಳು ಬೆಳಗಾದ ಕೂಡಲೇ, ಕಾರಣವೇನೂ ಹೇಳದೆ ತನ್ನ ಮಗಳ ಮನೆಗೆ ಪ್ರಯಾಣ ಕಟ್ಟಿದಳು. ಸಿಂಹಾಚಲನಿಗೆ ಇದು ಬಹಳ ಕಷ್ಟವೆನಿಸಿದರೂ ಹೆಂಡತಿಯ ಬಾಯಿಗೆ ಭಯಪಟ್ಟು ಮಾತಾಡದೆ ಸುಮ್ಮನಿದ್ದು, ಚಿಕ್ಕಮ್ಮನ ಇಷ್ಟದಂತೆಯೇ ಬಿಟ್ಟನು.

ಅವನೇ ಹೋಗಿ ಬಾಡಿಗೆಯ ಗಾಡಿಯನ್ನು ತಂದನು. ಚಿಕ್ಕಮ್ಮನ ಜತೆಯಲ್ಲಿ ಅವನೂ ಹೋಗಿ, ಅವಳನ್ನು ಮಗಳ ಮನೆಯಲ್ಲಿ ಬಿಟ್ಟು, ಆಮೇಲೆ ಪಟ್ಟಣದಲ್ಲಿರುವ ತಾನು ಕೆಲಸಮಾಡುವ ಅಂಗಡಿಗೆ ಬಹಳ ತಡವಾಗಿಯೇ ಹೋದನು. ಆದುದರಿಂದ ಆ ದಿನದ ಕೆಲಸಗಳು ಹೆಚ್ಚಾಗಿ, ಅಲ್ಲಿಂದ ಅವನು ಮನೆಗೆ ಹೊರಡುವಾಗ ಹೊತ್ತು ಮುಳುಗಿತು.

ಪಟ್ಟಣದಿಂದ ಅವನ ಹಳ್ಳಿಗೆ ಹಿಂದಿರುಗಲು ಸಾಧಾರಣವಾದ ಬೀದಿಯೊಂದಲ್ಲದೆ, ಮತ್ತೊಂದು ಅಡ್ಡದಾರಿಯೂ ಇದ್ದಿತು. ಬೇಗನೇ ಮನೆ ಸೇರಬೇಕೆಂಬ ಆತುರದಲ್ಲಿ ಸಿಂಹಾಚಲನು ಜನರ ನಡೆದಾಟವಿಲ್ಲದ ಅಡ್ಡದಾರಿಯನ್ನೇ ಹಿಡಿದನು. ಅದು ಸಮೀಪದ ದಾರಿಯಾದರೂ ಕಾಡುಗಳ ನಡುವಿನಿಂದಾಗಿ ಹೋಗುತ್ತಿತ್ತು. ಅವನು ಆ ಕಾಡು ದಾರಿಯಲ್ಲಿರುವಾಗ ಚೆನ್ನಾಗಿ ಕತ್ತಲಾಗಿತ್ತು. ಆದರೆ

ಶುಕ್ಲಪಕ್ಷವಾದುದರಿಂದ ಮೊಸರು ಚೆಲ್ಲಿದ ಹಾಗೆ ಸೊಗಸಾದ ಬೆಳದಿಂಗಳು ಸುರಿಯುತ್ತಿದ್ದಿತು.

ಅವನು ಒಂದು ಮರದ ಕೆಳಗೆ ಬರುವಾಗ, ಆ ಮರದ ಎಲೆಗಳು ಇದ್ದಕ್ಕಿದ್ದ ಹಾಗೆ ಗಲಗಲನೆ ಶಬ್ದಿಸಿದುವು. ಅದರ ಬೆನ್ನಿಗೇ ಎಲೆಗಳ ನಡುವಿನಿಂದ, "ಯಾರೋ? ಅವರಾರೋ? ಬರಬೇಕು! ಅವರಿಗೆ ಕೇಳುವುದನ್ನು ಕೊಡಬೇಕು!" ಎಂದು ಕರ್ಣಕಠೋರವಾದ ಕಂಠದಿಂದ ಹೊರಡುವ ವಿಚಿತ್ರವಾದ ಹಾಡಿನ ಧ್ವನಿ ಕೇಳಿತು.



ಸಿಂಹಾಚಲನು ಆಶ್ಚರ್ಯಪಡುತ್ತ, ತಲೆ ಎತ್ತಿ ಮೇಲೆ ನೋಡಿ, ಅದೊಂದು ನೇರಳೇ ಮರವೆಂದು ತಿಳಿದು, ".ಈ ನೇರಳೇ ಮರ ಏನು ತಾನೇ ಕೊಟ್ಟೀತು? ನೇರಳೇ ಹಣ್ಣು ತಾನೇ?" ಎಂದನು ಗಟ್ಟಿಯಾಗಿ.

ಮರುಕ್ಷಣದಲ್ಲಿ ಒಂದು ನೇರಳೇ ಹಣ್ಣು ಪುಟಕ್ಕನೆ ಅವನ ಕಾಲಿನ ಹತ್ತಿರ ಬಿತ್ತು. ಅದನ್ನು ಎತ್ತಿ ಚೀಲದೊಳಗೆ ಇಟ್ಟುಕೊಂಡು ಸಿಂಹಾಚಲನು ಮುಂದಕ್ಕೆ ನಡೆದನು.

ಸ್ವಲ್ಪದೂರ ನಡೆಯುವಷ್ಟರಲ್ಲಿ ಮತ್ತೊಂದು ಮರದ ಎಲೆಗಳು ಗಲಗಲವೆಂದುವು. ಆಮೇಲೆ, "ಯಾರಯ್ಯಾ ನೀನು? ನಿನಗೇನು ಕೊಡಲಿ?" ಎಂದು ಮತ್ತೊಂದು ಬಗೆಯ ಕರ್ಣಕಠೋರವಾದ ಹಾಡು ಕೇಳಿಸಿತು.

ಸಿಂಹಾಚಲನು ಅದು ಬೇಲದ ಮರವೆಂದು ಗುರುತಿಸಿದನು. ಕೂಡಲೇ, "ಬೇಲದ ಮರತಾನೇ? ಬೇಲದ ಹಣ್ಣಲ್ಲದೆ ಮತ್ತೇನು ಕೊಡಲು ಸಾಧ್ಯ?" ಎಂದನು ಗಟ್ಟಿಯಾಗಿ.

ಮರುಕ್ಷಣದಲ್ಲಿ ಅವನ ಕಾಲಿನ ಹತ್ತಿರ ಒಂದು ಬೇಲದ ಹಣ್ಣು ಟಪ್ಪನೆ ಬಿತ್ತು. ಸಿಂಹಾಚಲನು ಅದನ್ನು ಎತ್ತಿ ಚೀಲದೊಳಗೆ ಹಾಕಿಕೊಂಡು ಮುಂದೆ ನಡೆದನು. ಅವನು ಮತ್ತೆ ಸ್ವಲ್ಪ ದೂರ ನಡೆಯಲು, ಮತ್ತೊಂದು ಮರದ ಎಲೆಗಳು ನಡುಗಿ, ಶಬ್ದಿಸುತ್ತ, "ಕೊಡುತ್ತೇನೆ, ತೆಗೆದುಕೋ! ಕೇಳಿದ್ದು ಕೂಡಲೇ ಕೊಡುತ್ತೇನೆ! ತೆಗೆದುಕೋ!" ಎಂದು ಮತ್ತಿಷ್ಟು ಕರ್ಣಕಠೋರವಾಗಿ ಕೂಗಿ ಹಾಡಿತು.

ಸಿಂಹಾಚಲನು ಎರಡು ಕಿವಿಗಳನ್ನೂ ಮುಚ್ಚಿಕೊಂಡು, ಅದು ಮಾವಿನ ಮರವೆಂದು ತಿಳಿದು, "ಮಾವಿನಮರವು ಮಾವಿನ ಹಣ್ಣನ್ನಲ್ಲದೆ ಬೇರೇನು ತಾನೇ ಕೊಡುತ್ತೇ?" ಎಂದು ಕಿರಿಚಿದನು. ಕೂಡಲೇ ಅವನ ಕಾಲ ಬುಡದಲ್ಲಿ ಬುಡುಮ್ಮನೆ ಮಾವಿನ ಹಣ್ಣೊಂದು ಬಿತ್ತು. ಸಿಂಹಾಚಲನು ಅದನ್ನು ಕೂಡಾ ತೆಗೆದುಕೊಂಡು ಚೀಲಕ್ಕೆ ಹಾಕಿ, ಸ್ವಲ್ಪ ಹೊತ್ತಿಗೆ ಮನೆಗೆ ಹೋಗಿ ಸೇರಿದನು.

ಲಾವಣ್ಯ ಚೀಲದೊಳಗಿರುವ ಆ ಮೂರು ಬಗೆಯ ಹಣ್ಣುಗಳನ್ನೂ ನೋಡಿ ಅತ್ಯಾಶ್ಚರ್ಯಪಡುತ್ತ, "ಕಾಲವಲ್ಲದ ಕಾಲದಲ್ಲಿ ಇವು ಎಲ್ಲಿ ಸಿಕ್ಕಿದುವು ನಿಮಗೆ?" ಎಂದು ಗಂಡನನ್ನು ಕೇಳಿದಳು.



ಸಿಂಹಾಚಲನು ನಡೆದ ಸಂಗತಿಯನ್ನೆಲ್ಲಾ ಅವಳೊಂದಿಗೆ ಹೇಳಿದನು. ಅಷ್ಟು ಕೇಳಿದ ಕೂಡಲೇ ಲಾವಣ್ಯಳು ಅವನನ್ನು ಕೋಪದಿಂದ ನೋಡುತ್ತ, "ಎಂಥಾ ಬುದ್ಧಿಯಿಲ್ಲದ ಕೆಲಸ ಮಾಡಿದಿರಪ್ಪಾ ! ನಿಮ್ಮೊಂದಿಗೆ ಮಾತಾಡಿದ್ದು ಆ ಮರಗಳೇ ಅಂದುಕೊಂಡಿರೇನು ? ಆ ಮರಗಳ ಮೇಲಿರುವ ಯಾವುದೋ ಪರೋಪಕಾರ ಬುದ್ಧಿಯ ಪಿಶಾಚಿಗಳೋ ವನದೇವತೆಗಳೋ ಆಗಿರಬೇಕೆಂದು ನಿಮಗೆ ತೋರಲೇ ಇಲ್ಲವೇ ? ನಾಳೆ ಕತ್ತಲಾದ ಮೇಲೆ ಆ ದಾರಿಯಲ್ಲೇ ಬನ್ನಿರಿ. ಅವುಗಳ ಹತ್ತಿರ ಏನು ಕೇಳಬೇಕೆಂದು ನಾನು ಹೇಳುತ್ತೇನೆ. ಬೆಳಗಾಗಲಿ, ಆಲೋಚನೆ ಮಾಡಿ ಹೇಳುತ್ತೇನೆ" ಎಂದಳು.

ಅವಳು ರಾತ್ರಿ ಪೂರಾ ಆಲೋಚನೆ ಮಾಡಿ ಗಂಡನು ಆ ಪಿಶಾಚಿಗಳೊಂದಿಗೆ ಏನು ಕೇಳಬೇಕೆಂಬುದನ್ನು ನಿರ್ಣಯಿಸಿ, ಅದನ್ನು ಗಂಡನಿಗೆ ಹೇಳಿದಳು.

ಮರುದಿನ ಸಿಂಹಾಚಲನು ಕತ್ತಲೆಬಿದ್ದ ಮೇಲೆಯೇ ಪಟ್ಟಣದಿಂದ ಅದೇ ದಾರಿಯಾಗಿ ಮನೆಗೆ ಹಿಂದಿರುಗಿದನು. ಅವನು ನೇರಳೇ ಮರದ ಹತ್ತಿರ ಬರುವಾಗ ಮಳೆ ಪ್ರಾರಂಭವಾಯಿತು. ನೇರಳೇ ಮರದ ಎಲೆಗಳು ಗಲಗಲವೆಂದುವು. ಅದರೊಂದಿಗೆ ನಿನ್ನೆ ರಾತ್ರಿ ಕೇಳಿದಂತಹ ಮಾತುಗಳೂ ಹೊರಟುವು.

ಹೆಂಡತಿ ಹೇಳಿದ್ದನ್ನು ನೆನಪಿಟ್ಟುಕೊಂಡಿದ್ದ ಸಿಂಹಾಚಲನು, "ನೇರಳೇ ಮರವು ನನಗೆ ಒಳ್ಳೆಯ ಸೌಂದರ್ಯವನ್ನು ಪ್ರಸಾದಿಸಿದರೆ ಬಹಳ ಸಂತೋಷಪಡುತ್ತೇನೆ" ಎಂದನು.

ಕೂಡಲೇ ಮರದ ಮೇಲಿನಿಂದ ಧಾರೆಧಾರೆಯಾಗಿ ನೀರು ಅವನ ಮೇಲೆ ಸುರಿಯಿತು. ಮಿಂಚಿನ ಬೆಳಕಿನಲ್ಲಿ ಸಿಂಹಾಚಲನು ತನ್ನ ಶರೀರವನ್ನು ನೋಡಿಕೊಳ್ಳಲು, ಶರೀರವು ಬಂಗಾರದ ಛಾಯೆಯಾಗಿ ಮಾರ್ಪಟ್ಟಿದ್ದನ್ನು ನೋಡಿ ಸಂತೋಷಪಟ್ಟನು.

ಅವನು ಮುಂದೆ ಕಾಣುವ ಬೇಲದ ಮರದ ಹತ್ತಿರ ಹೋಗುವುದರೊಳಗೆ ಕಿವಿ ತೂತಾಗುವಂತೆ ಸಿಡಿಲು ಬಿದ್ದು ನೇರಳೇ ಮರವು ಭಗಭಗನೆ ಉರಿಯುತ್ತ ನೆಲಕ್ಕೆ ಮಗುಚಿಕೊಂಡಿತು.

ಬೇಲದ ಮರದ ಹತ್ತಿರ ಬಂದ ಸಿಂಹಾಚಲನು, ಹಿಂದಿನಂತೆಯೇ ಆ ಮರವು ಕೇಳಲು, "ಬೆಲೆಯಿಲ್ಲದಷ್ಟು ಐಶ್ವರ್ಯವನ್ನು ಕೊಟ್ಟರೆ ಎಷ್ಟೊಂದು ಆನಂದವೋ !" ಎಂದನು.

ಅವನ ಕಾಲಿನ ಹತ್ತಿರ ಒಂದು ಖಾಲೀ ಚೀಲವು ದೊಪ್ಪನೆ ಬಿತ್ತು. ಸಿಂಹಾಚಲನು ಅದನ್ನು ಎತ್ತಿಕೊಳ್ಳಲು, ಆ ಚೀಲದೊಳಗಿನಿಂದ ಒಂದೇ ಸವನೆ ಬಂಗಾರದ ನಾಣ್ಯಗಳು ಬೀಳತೊಡಗಿದುವು. ಅವನು ಕೆಳಗೆ ಬಿದ್ದ ನಾಣ್ಯಗಳನ್ನೆಲ್ಲಾ ಬಾಚಿ ಚೀಲದೊಳಗೆ ತುಂಬಿಸಿ, ತಲೆಯಲ್ಲಿ ಹೊತ್ತುಕೊಂಡು ಮುಂದಕ್ಕೆ ಹೊರಟನು.

ಅವನು ಮಾವಿನ ಮರವನ್ನು ಸಮೀಪಿಸುವುದ ರೊಳಗೆ ಬೇಲದ ಮರವೂ ಸಿಡಿಲಿನ ಹೊಡೆತಕ್ಕೆ ಗುರಿಯಾಗಿ ನೆಲಕ್ಕೆ ಮಗುಚಿಬಿತ್ತು.

ಮಾವಿನ ಮರವು ಮಾಡಿದ ಪ್ರಶ್ನೆಗೆ ಸಿಂಹಾ ಚಲನು, "ಮಾವಿನ ಮರವು ನನ್ನ ಮೇಲೆ ಅದೃಷ್ಟದ ಮುದ್ರೆ ಹಾಕಿದರೆ ಎಷ್ಟು ಚೆನ್ನಾಗಿರುತ್ತೆ!" ಎಂದನು.

ಕೂಡಲೇ ಅವನ ತಲೆಯ ಮೇಲೆ ಏನೋ ಬಿದ್ದ ಹಾಗೆ ತೋರಿತು. ತಡವಿ ನೋಡಿದರೆ ಏನೂ ಸಿಗಲಿಲ್ಲ. ಅದೇನೆಂದು ತಿಳಿಯದೆ ಸಿಂಹಾಚಲನು ಅಲ್ಲಿಂದ ಮುಂದೆ ನಡೆದ ಕೂಡಲೇ, ಆ ಮಾವಿನ ಮರಕೂಡಾ ಸಿಡಿಲಿನ ಪೆಟ್ಟಿಗೆ ಗುರಿಯಾಗಿ ಮಗುಚಿ ಕೊಂಡಿತು.

ಸಿಂಹಾಚಲನು ಬಂಗಾರದ ನಾಣ್ಯಗಳ ಮೂಟೆ ಹೊತ್ತುಕೊಂಡು ಮನೆಯ ದಾರಿ ಹಿಡಿದು ನಡೆಯು ತ್ತಿದ್ದನು. ಸುಳಿಗಾಳಿಯ ದೆಸೆಯಿಂದಲೂ, ಬಂಗಾರದ ಚೀಲದ ಭಾರದಿಂದಲೂ ನಡೆಯುವುದು ಬಹಳ ಕಷ್ಟವಾಗಿತ್ತು. ನಡೆಯುತ್ತ ದಿಣ್ಣೆಯೊಂದನ್ನು ಏರಿ, ಇಳಿಯುವಾಗ ಒಂದು ಕಲ್ಲಿನ ಮೇಲಿಟ್ಟ ಕಾಲು ಜಾರಿ ಮುಗ್ಗುರಿಸಿ ಬಿದ್ದು ಹೊರಳಿ ಆಚೆಗಿದ್ದ ಕೆಸರಿನ ಹೊಂಡಕ್ಕೆ ಬಿದ್ದನು. ಬಂಗಾರ ನಾಣ್ಯಗಳ ಚೀಲ ಕೆಸರು ಹೊಂಡದ ಅಡಿಗೆ ಹೋಗಿಬಿಟ್ಟಿತು. ಅವನ ಶರೀರವು ಎದೆಯವರೆಗೂ ಕೆಸರಿನಲ್ಲಿ ಇಳಿದು ಹೋಯಿತು.

ಇನ್ನು ತನಗೆ ಸಾವು ಬರುವುದೆಂದುಕೊಂಡು ಸಿಂಹಾಚಲನು ತನ್ನ ದುರದೃಷ್ಟವನ್ನು ಹಳಿದನು. ಮಾವಿನ ಮರವು ಅವನಿಗೆ ಅದೃಷ್ಟದ ಮುದ್ರೆ ಹಾಕಿರಬೇಕು, ಪಕ್ಕದಲ್ಲಿದ್ದ ಮರದ ಕೊಂಬೆಯೊಂದು ಗಾಳಿಯ ಹೊಡೆತಕ್ಕೆ ಲಟಾಲ್ಲನೆ ಮುರಿದು ಆ ಕೆಸರು ಹೊಂಡಕ್ಕೇ ಬಿತ್ತು. ಅವನ ಸಮೀಪದಲ್ಲೇ ಅದು ಬಿದ್ದುದರಿಂದ ಅದನ್ನು ಹಿಡಿದುಕೊಂಡು ಕೆಸರಿನಿಂದ ಮೇಲೆದ್ದು ಬಂದನು.

ಅಲ್ಲಿಂದ ಉಬ್ಬಸ ಬಿಡುತ್ತ ನಡೆದು, ಮೂಡಲು ಬೆಳಗಾಗುವ ಹೊತ್ತಿಗೆ ತನ್ನ ಮನೆಯನ್ನು ಸೇರಿ



ಬದುಕಿದೆನೆಂಬ ಸಂತೋಷದಲ್ಲಿ ಮೂರ್ಛೆ ಹೋಗಿ ಬಿದ್ದನು. ಗಂಡನ ಸ್ಥಿತಿಯನ್ನು ನೋಡಿ ಲಾವಣ್ಯಳಿಗೆ ಭಯವಾಯಿತು. ಏನು ಮಾಡಬೇಕೆಂದು ಹೇಳಲು ಮನೆಯಲ್ಲಿ ಅನುಭವಸ್ಥರಾದ ಹಿರಿಯ ದಿಕ್ಕು ಯಾವುದೂ ಇಲ್ಲ. ಈಗ ಅತ್ತೆಯ ನೆನಪಾಗಿ, ಅತ್ತೆಯನ್ನು ಕರೆದುಕೊಂಡು ಬರಲು ನೆರೆಮನೆಯವರನ್ನು ಓಡಿಸಿದಳು.

ಮಧ್ಯಾಹ್ನದ ಹೊತ್ತಿಗೆ ಮುಖ ತುಂಬ ದಿಗಿಲು ಮಾಡಿಕೊಂಡು ಸಿಂಹಾಚಲನ ಚಿಕ್ಕಮ್ಮ ಮೀನಾಕ್ಷಿ ಅಲ್ಲಿಗೆ ಬಂದಳು. ಅವಳ ಸಪರ್ಯೆಗಳಿಂದ ಸಿಂಹಾಚಲನು ಎಂದಿನಂತೆ ಗುಣಮುಖನಾಗಲು ಒಂದು ತಿಂಗಳು ಹಿಡಿಯಿತು, ಅವನಿಗೆ ಕಾಡಿನಲ್ಲಿ ಲಭಿಸಿದ ಬಂಗಾರದ ಶರೀರ ಛಾಯೆಯ ಹೊರತು, ಈಗ ಮತ್ತೇನೂ ಉಳಿದಿಲ್ಲ. ನಡೆದುದೆಲ್ಲ ನೆನಪಿರುವಂತೆ ಶರೀರದಲ್ಲಿ ಮಾಸಿದ ಗಾಯಗಳ ಮಚ್ಚೆಗಳು ಮಾತ್ರ ಹಾಗೇ ಇದ್ದುವು.

ನಡೆದ ಸಂಗತಿಯನ್ನೆಲ್ಲಾ ವಿವರವಾಗಿ ತಿಳಿದ ಮೇಲೆ, ಮೀನಾಕ್ಷಿ ಲಾವಣ್ಯಳೊಂದಿಗೆ, " ನೀನೇನೋ ಗಂಡನ ಹತ್ತಿರ ಮೊದಲನೇ ಪಿಶಾಚದ ಹತ್ತಿರ ಗಂಡನಿಗೆ ಚಂದ ಬರುವಂತೆ ಕೇಳಲು ಹೇಳಿದೆ, ಅಂದ ಚಂದಗಳಿಗಿಂತಲೂ ಆರೋಗ್ಯವೇ ಮುಖ್ಯವೆಂದು ನಿನಗೆ ಗೊತ್ತಾಗಲಿಲ್ಲ. ಎರಡನೇ ಪಿಶಾಚಿ ಕೊಟ್ಟ ಬಂಗಾರದ ನಾಣ್ಯಗಳೂ ಪ್ರಯೋಜನವಿಲ್ಲದೆ ಹೋದುವು. ಒಟ್ಟಿನ ಮೇಲೆ ಮೂರನೇ ಸಾರಿ ಕೇಳಿಕೊಂಡ ಅದೃಷ್ಟವೇ ಅವನನ್ನು ಕೆಸರ ಗುಂಡಿಯಿಂದ ಕಾಪಾಡಿತು ! " ಎಂದಳು.

" ಆ ಸಮಯದಲ್ಲಿ ಆಲೋಚನೆ ಹೇಳಲಿಕ್ಕೆ ನೀವು ಮನೆಯಲ್ಲಿರಲಿಲ್ಲ. ಆದ್ದರಿಂದಲೇ ನಾನು ಅವರ ಹತ್ತಿರ ಅವಿವೇಕದ ಕೋರಿಕೆ ಕೇಳಿಸಿದೆನು. ಈಗ ಬುದ್ಧಿ ಬಂತು ಅತ್ತೇ " ಎಂದಳು ಲಾವಣ್ಯ ಕಂಬನಿ ತುಂಬಿಕೊಂಡು.

" ಈಗಾದರೂ ಮಿಂಚಿ ಹೋದುದೇನಿಲ್ಲ. ಅದೃಷ್ಟವಿರುವಾಗ ಕಷ್ಟಪಟ್ಟು ಕೆಲಸಮಾಡಿಕೊಂಡಿದ್ದರೆ ಸಿಂಹಾಚಲನು ಖಂಡಿತಾ ಒಳ್ಳೆಯ ಸ್ಥಿತಿಗೆ ಬರುತ್ತಾನೆ. ಚಿರಕಾಲ ಸುಖವಾಗಿರಿ " ಎಂದು ಹರಸಿ ಮೀನಾಕ್ಷಿ ಮತ್ತೆ ಹೊರಟು ಹೋಗಲು ಎದ್ದಳು. ಲಾವಣ್ಯ ಕಣ್ಣೀರು ಒರೆಸಿಕೊಂಡು ಅತ್ತೆಯ ಎರಡು ಕೈಗಳನ್ನೂ ಹಿಡಿದು, " ಅತ್ತೇ, ನನ್ನ ಮೂರ್ಖತನವನ್ನು ಕ್ಷಮಿಸಿರಿ. ನೀವು ಎಲ್ಲಿಗೂ ಹೋಗಬಾರದು. ನಮಗೆ ಹಿರಿಯ ದಿಕ್ಕಾಗಿ ಇಲ್ಲಿಯೇ ಇರಬೇಕು " ಎಂದು ಬೇಡಿಕೊಂಡಳು.

ಲಾವಣ್ಯಳಲ್ಲಿ ಬಂದ ಬದಲಾವಣೆಯನ್ನು ನೋಡಿ ಮೀನಾಕ್ಷಿಗಷ್ಟೇ ಅಲ್ಲ, ಸಿಂಹಾಚಲನಿಗೂ ಬಹಳ ಸಂತೋಷವಾಯಿತು.





# ಮರೆಗೂಳಿ ನೌಕರ

**ಹಿಂದೆ** ಆತ್ರೇಯಪುರದಲ್ಲಿ ಪಂಕಜನಾಭರೆಂಬ ಜಮೀನ್ದಾರರಿದ್ದರು. ಅವರ ಮನೆಯಲ್ಲಿ ಸಿದ್ದಪ್ಪನೆಂಬ ನೌಕರನೊಬ್ಬನಿದ್ದನು. ಅವನಿಗೆ ವಿಪರೀತ ಮರೆವು. ಬಯ್ಗುಳು ತಿಂದರೂ ಕೋಪ ತಾಪಗಳೇ ನಿಲ್ಲದ ಒಳ್ಳೆಯವನೇ. ಯಾವಾಗಲೂ ಚುರುಕಾಗಿಯೇ ಇರುತ್ತಾನೆ. ಆದುದರಿಂದ ಅವನು ಎಷ್ಟೇ ತಪ್ಪು ಮಾಡಿದರೂ ಜಮೀನ್ದಾರರು ಕ್ಷಮಿಸಿ ಸುಮ್ಮನಿದ್ದರು.

ಒಂದು ದಿನ ರಾತ್ರಿ ಜಮೀನ್ದಾರರಿಗೆ ಥಕ್ಕನೆ ಏಕೋ ಹೊಟ್ಟೇನೋವು ಶುರುವಾಯಿತು. ಅವರು ಸಿದ್ದಪ್ಪನನ್ನು ಕರೆದು, ವೈದ್ಯ ಶೇಷಾಚಾರ್ರ ಬಳಿಗೆ ಹೋಗಿ ಹೊಟ್ಟೇನೋವಿಗೆ ಮಾತ್ರೆಗಳನ್ನು ಕೇಳಿ ತಾರೆಂದು ಹೇಳಿ ಕಳುಹಿಸಿದರು. ಸಿದ್ದಪ್ಪನು ಶೇಷಾಚಾರ್ರ ಹತ್ತಿರ ಹೋಗಿ, ಅವರು ಕೊಟ್ಟ ಮಾತ್ರೆಗಳನ್ನು ತೆಗೆದುಕೊಂಡು ಕಾಲುಗಂಟೆಯೊಳಗೇ ಹಿಂದಿರುಗಿ ಬಂದನು. ಆ ಮಾತ್ರೆಗಳನ್ನು ತೆಗೆದುಕೊಂಡ ಜಮೀನ್ದಾರ್ರಿಗೆ ಹೊಟ್ಟೆನೋವು ಕಡಿಮೆಯಾಗಲೇ ಇಲ್ಲ. ಬೆಳಗಾಗುವವರೆಗೂ ನಿದ್ದೆಯಿಲ್ಲದೆ ಸಂಕಟಪಡುತ್ತಾ ಇದ್ದರು.

ಮರುದಿನ ಬೆಳಿಗ್ಗೆ ಶೇಷಾಚಾರ್ರು ಜಮೀನ್ದಾರರನ್ನು ನೋಡಲು ಬಂದು, ."ಹೇಗಿದೆ ಸ್ವಾಮಿ ನಿಮ್ಮ ತಲೆನೋವು ?" ಎಂದು ಕೇಳಿದರು.

ಜಮೀನ್ದಾರರು ಕೋಪದಿಂದ ಅವರನ್ನು ನೋಡಿ, "ನನಗೆ ತಲೆನೋವೆಂದು ನಿಮಗಾರು ಹೇಳಿದರು ? ಸಿದ್ದಪ್ಪನ ಹತ್ತಿರ ಹೊಟ್ಟೆನೋವಿಗೆ ಮಾತ್ರೆ ತಾರೆಂದು ಕಳಿಸಿದ್ದೇನೆ. ನೀವು ತಲೆ ನೋವಿನ ಮಾತ್ರೆಗಳನ್ನೇ ಕೊಟ್ಟು ಕಳಿಸಿದ್ದು ? ಅಬ್ಬ ! ಹೊಟ್ಟೆ ಹಿಡಿದುಕೊಂಡು ಎಷ್ಟು ಸಂಕಟಪಡುತ್ತಿದ್ದೇನೆ, ಗೊತ್ತಾ ?" ಎಂದರು.

ಶೇಷಾಚಾರ್ರು ಬೆಕ್ಕಸಪಟ್ಟು, "ಅರರೇ ! ತಾವು ಹೀಗೆ ಹೇಳುವಿರಾ ! ರಾತ್ರಿ ಸಿದ್ದಪ್ಪ ಬಂದು ನಿಮಗೆ ತಲೆನೋವು ಎಂತಲೇ ಹೇಳಿದ. ಆದ್ದರಿಂದ ನಾನು ತಲೆನೋವಿನ ಮೂರು ಮಾತ್ರೆಗಳನ್ನೇ ಕೊಟ್ಟು ಕಳಿಸಿದ್ದೆ" ಎಂದರು.

ಸಿದ್ದಪ್ಪನದೇ ತಪ್ಪು ಎಂದು ಜಮೀನ್ದಾರರಿಗೆ ತಿಳಿದು ಹೋಯಿತು. ಅವರಿಗೆ ರಾತ್ರಿ ತಾನು ಪಟ್ಟ ಸಂಕಟವನ್ನು ನೆನೆದುಕೊಂಡಾಗ ವಿಪರೀತ ಸಿಟ್ಟು ಬಂತು. ಕೂಡಲೇ ಅವರು ಸಿದ್ದಪ್ಪನನ್ನು

ಯಂ. ಐ. ಕಿಷನ್

ಕರೆದು ಗಟ್ಟಿಯಾಗಿ ಬಯ್ದು, "ಥೀ ! ನಿನ್ನಿಂದಾಗಿ ನಾನು ರಾತ್ರಿ ಪೂರಾ ಪೇಚಾಡಿ ಹೋದೆ. ನಿನ್ನಂಥ ಮರೆಗೂಳಿಯನ್ನು ನೌಕರಿಗೆ ಇಟ್ಟುಕೊಂಡದ್ದು ನನ್ನದೇ ತಪ್ಪು, ನಿನ್ನ ಮರೆವಿನಿಂದ ಒಂದು ದಿನ ಪ್ರಾಣ ಹೋದರೂ ಹೋದೀತು ! ನಿನ್ನನ್ನು ಕೆಲಸದಿಂದ ತೆಗೆದು ಹಾಕಿದ್ದೇನೆ." ಎಂದು ಹೇಳಿ, ಅವನಿಗೆ ಸಲ್ಲ ಬೇಕಾದ ಸಂಬಳದ ಹಣವನ್ನು ಎಣಿಸಿ ಕೊಟ್ಟು ಕಳುಹಿಸಿಬಿಟ್ಟರು.

ಆದರೆ ಮರುದಿನ ಸಿದ್ದಪ್ಪ ಎಂದಿನಂತೆ ಅವರ ಮನೆಯಲ್ಲಿ ಕೆಲಸ ಮಾಡಿಕೊಂಡಿರುವುದು ಜಮೀನ್ದಾರರಿಗೆ ಕಂಡಿತು.

ಜಮೀನ್ದಾರರು ಅವನನ್ನು ಕೋಪದಿಂದ ನೋಡಿ, "ನಿನ್ನನ್ನು ಕೆಲಸದಿಂದ ತೆಗೆದುಹಾಕಿದೆನೆಂದು ಹೇಳಿದೆನಲ್ಲಾ ? ಮತ್ತೇಕೆ ಬಂದೆ ಇಲ್ಲಿ ?" ಎಂದು ಕೇಳಿದರು.

"ಓ ! ಹೌದೌದು. ಆ ಮಾತು ಮರೆತೇ ಹೋದೆ. ಇವತ್ತಿನಿಂದ ಕೆಲಸಕ್ಕೆ ಬರುವುದಿಲ್ಲ ದೊರೆಗಳೇ" ಎಂದು ಹೇಳಿದನು.

ಸಿದ್ದಪ್ಪನು ತನ್ನ ದುಸ್ತಿನಲ್ಲಿ ಕಟ್ಟಿಕೊಂಡಿದ್ದ ಸ್ವಲ್ಪ ಹಣವನ್ನು ತೆಗೆದು ಕೆಳಗಿಟ್ಟು, "ನಿನ್ನೆ ತಾವು ಯಾಕೋ ಈ ಹಣ ನನ್ನ ಹತ್ತಿರ ಕೊಟ್ಟಿರಿ. ತೆಗೆದಿಡಲಿಕ್ಕೆ ಹೇಳಿದಿರಂತ ಕಾಣುತ್ತೆ." ಎಂದು ನಿನ್ನೆ ಜಮೀನ್ದಾರರು ಕೊಟ್ಟ ಅವನ ಸಂಬಳದ ಹಣವನ್ನು ಅವರ ಮುಂದೆ ಇಟ್ಟು, ಅಲ್ಲಿಂದ ಹೊರಟನು.

ಸಿದ್ದಪ್ಪನ ಮರೆವಿನ ವಿಪರೀತವನ್ನು ನೆನೆದು, ಈ ಸಾರಿ ಕೋಪ ಬರುವುದಕ್ಕೆ ಬದಲಾಗಿ ಅವನ ಮೇಲೆ ಕನಿಕರ ಒಸರಿತು ಜಮೀನ್ದಾರರಿಗೆ.

ಅವರು ಅವನನ್ನು ಹಿಂದಕ್ಕೆ ಕರೆದು, "ಲೋ ಮರೆಗೂಳಿ ಮಂಕಾ? ಆ ಹಣ ನಿನ್ನದೇ ಅಲ್ವೇನೋ? ನಿನ್ನೆ ನಿನ್ನನ್ನು ಕೆಲಸದಿಂದ ತೆಗೆದುಹಾಕಿ ನಿನ್ನ ಸಂಬಳ ಹಣದ ಮೊತ್ತವೆಂದು ಲೆಕ್ಕಮಾಡಿ ಹೇಳಿ ಕೊಟ್ಟಿದ್ದೇನಲ್ಲಾ ? ತೆಗೆದುಕೊಂಡು ಹೋಗು ಇದನ್ನು !" ಎಂದರು.

ಓ ! ಹೌದೌದು, ಈಗ ನೆನಪಿಗೆ ಬಂತು. ಒಳ್ಳೇದು ಸ್ವಾಮಿ." ಎಂದು ಅಲ್ಲಿಟ್ಟ ಹಣವನ್ನು ತೆಗೆದುಕೊಂಡು ಹಿಂದಿರುಗಿದನು ಸಿದ್ದಪ್ಪ.

"ನಿಲ್ಲಲೋ ಅಲ್ಲೇ !" ಎಂದು ಜಮೀನ್ದಾರರು, "ಹೋಗಬೇಡ ಬಿಡು. ಇವತ್ತಿನಿಂದ ಮತ್ತೆ ನಿನ್ನನ್ನು ಕೆಲಸಕ್ಕೆ ಇಟ್ಟುಕೊಳ್ಳುತ್ತೇನೆ. ಒಳಗೆ ಹೋಗಿ ನಿನ್ನ ಕೆಲಸ ನೋಡಿಕೊಂಡಿರು" ಎಂದು ಹೇಳಿದರು.

ಮರುದಿನ ಆ ಜಮೀನ್ದಾರರು, ಮರೆವಿನ ರೋಗಕ್ಕೆ ಒಳ್ಳೆಯ ಮದ್ದು ಇದ್ದರೆ ಕೊಡುವಂತೆ ಕೇಳಲು, ವೈದ್ಯ ಶೇಷಾಚಾರ್ರನ್ನು ಕರೆಯಲು ಇನ್ನೊಬ್ಬ ಆಳನ್ನು ಕಳುಹಿಸಿದರು.





ಪಟ್ಟಾಭಿಷಿಕ್ತನಾಗಿ ಮಹಾರಾಜನಾದ ರಾಮನು ಭರತ ಶತ್ರುಘ್ನರ ಸಹಾಯದಿಂದ ರಾಜ್ಯವನ್ನು ಸುವ್ಯವಸ್ಥೆಗೊಳಿಸಿ, ಆದರ್ಶಪ್ರಾಯವಾಗುವಂತೆ ಪಾಲನೆ ಮಾಡತೊಡಗಿದನು.

ಹಾಗಿರುವಾಗ ಒಂದು ವಿಚಿತ್ರ ಸಂಭವವಾಯಿತು. ಒಂದು ದಿನ ಗ್ರಾಮವಾಸಿಯಾದ ಬ್ರಾಹ್ಮಣನೊಬ್ಬನು ತನ್ನ ಐದು ವಯಸ್ಸಿನ ಮಗನ ಶವವನ್ನು ತಂದು ರಾಜದ್ವಾರದ ಹತ್ತಿರ ಇಟ್ಟು ರೋದಿಸಲು ತೊಡಗಿದನು. ರಾಜ್ಯಪಾಲನೆ ಸರಿಯಾಗಿದ್ದರೆ, ಈ ಬಗೆಯ ಅಕಾಲ ಮರಣವು ಬರುತ್ತಿತ್ತೇ ಎಂಬುದು ಅವನ ರೋದನೆ. ಇಕ್ಷ್ವಾಕು ವಂಶದ ರಾಜ್ಯದಲ್ಲಿ ರಾಮನ ಪಾಲನೆ ಬಹಳ ಕೇಡಿನದಾಯಿತಲ್ಲಾ ಎಂದು ಎದೆಬಡೆದುಕೊಂಡನು ಆ ಬ್ರಾಹ್ಮಣ.

ಈ ಸಂಗತಿಯನ್ನು ತಿಳಿದು ರಾಮನು ಬಹಳವಾಗಿ ಚಿಂತಿಸಿ, ಮಂತ್ರಿಗಳನ್ನೂ, ವಸಿಷ್ಠ ಮೊದಲಾದ ಪುರೋಹಿತರನ್ನೂ ಕರೆಯಿಸಿ ಅವರೊಂದಿಗೆ, ಬ್ರಾಹ್ಮಣ ಕುಮಾರನ ಅಕಾಲಮರಣಕ್ಕೆ ಕಾರಣವೇನೆಂದು ಪರಿಶೀಲಿಸುವಂತೆ ಕೇಳಿಕೊಂಡನು. ಶಂಬುಕನೆಂಬೊಬ್ಬ ಶೂದ್ರನು ದೊಡ್ಡ ತಪಸ್ಸು ಮಾಡುತ್ತಿರುವನೆಂದೂ, ಅದು ಯುಗಧರ್ಮಕ್ಕೆ ವಿರೋಧವೆಂದೂ, ಆದುದರಿಂದಲೇ ಅಕಾಲ ಮರಣಕ್ಕೆ ಅದೇ ಕಾರಣವೆಂದೂ ನಾರದನು ಹೇಳಿದ ಸಂಗತಿಯಿಂದ ಗೊತ್ತಾಯಿತು.

ಕೂಡಲೇ ರಾಮನು ಲಕ್ಷ್ಮಣನೊಂದಿಗೆ, "ನೀನು ಬೇಗನೇ ಹೋಗಿ ಆ ಬ್ರಾಹ್ಮಣನನ್ನು ಸಮಾಧಾನಪಡಿಸು. ಆ ಬಾಲಕನ ಕಳೇಬರವನ್ನು ತೈಲ ಭಾಂಡದಲ್ಲಿ ಭದ್ರವಾಗಿಡಿಸು" ಎಂದು ಆಜ್ಞೆ ಮಾಡಿದನು. ತರುವಾಯ ರಾಮನು ಆಯುಧಗಳನ್ನು ತೆಗೆದುಕೊಂಡು ಪುಷ್ಪಕವಿಮಾನವೇರಿ, ಪೂರ್ವ, ಪಶ್ಚಿಮ, ಉತ್ತರ ದಿಕ್ಕುಗಳಲ್ಲೆಲ್ಲಾ ಹುಡುಕಾಡಿ, ಕಡೆಗೆ ದಕ್ಷಿಣ ದಿಕ್ಕಿನಲ್ಲಿದ್ದ ಒಂದಾನೊಂದು ಸರೋವರದಲ್ಲಿ ತಲೆಕೆಳಗಾಗಿ ತಪಸ್ಸಿನಲ್ಲಿ ಪೂರ್ತಿ ಮಗ್ನನಾಗಿದ್ದ ಶಂಬುಕನೆಂಬ ಆ ಮನುಷ್ಯನನ್ನು ನೋಡಿದನು. ತತ್ಕ್ಷಣವೇ ರಾಮನು ಪುಷ್ಪಕದಿಂದಿಳಿದು.

೧೫. ರಾಮರಾಜ್ಯ



ಖಡ್ಗದಿಂದ ಶಂಬುಕನ ತಲೆಯನ್ನು ಕಡಿದು ಹಾಕಿದನು. ಆಗ ಶಂಬುಕನ ತಲೆ ಕಣ್ಣುಗಳನ್ನು ಬಿಡಿಸಿ ರಾಮನನ್ನು ನೋಡಿ ಅತ್ಯಾನಂದದಿಂದ, "ಸ್ವತಃ ನೀನೇ ಬಂದೆಯಾ ರಾಮಾ? ಮರಣವೆಂಬುದು ಯಾವುದೋ ಒಂದು ವಿಧದಲ್ಲಿ ತಪ್ಪದೆ ಬರುವಂತಹುದೇ. ನೀನು ಕೇವಲ ನಿಮಿತ್ತ ಮಾತ್ರನೇ. ವರ್ಣಾಶ್ರಮಧರ್ಮಗಳಿಗೆ ಕಟ್ಟುಗೊಂಡ ವಿವಿಧ ವರ್ಣಗಳಿಂದ ಕೂಡಿದ ಪ್ರಜೆಗಳಿಗೆ ನೀನು ಮಹಾರಾಜನು. ರಾಜನೆಂದರೆ ಪ್ರಜೆಗಳ ಸೇವಕನು. ಧರ್ಮಕ್ಕೆ ವಿರುದ್ಧವಾಗಿ ಪ್ರವರ್ತಿಸಿದ ನನ್ನಂಥವನನ್ನು ನಿಗ್ರಹಿಸಲು ಸ್ವತಃ ಬಂದೆ. ನೀನೇ ನಿಜವಾದ ರಾಜನು. ನಿನ್ನನ್ನು ಕೊಲೆಕಾರ್ಯಕ್ಕೆ ಎಳೆದ ನಾನೇ ದೋಷಿಯಾಗಿರುವೆನು. ನನ್ನನ್ನು ಕ್ಷಮಿಸು! ನಾನು ಕುಲಧರ್ಮಗಳಿಗೆ ಅತೀತನಾದ ಯೋಗಿಯಾದುದರಿಂದಲೇ ಕಡೆಗೆ ಇಂತಹ ಕೆಲಸಮಾಡಿದೆನು. ನಿನ್ನ ಕೈಯಿಂದ ಮುಕ್ತಿಪಡೆದು ನಾನು ವಿಷ್ಣು ಸಾಯುಜ್ಯವನ್ನೇ ಹೊಂದುವಂತೆ ಮಾಡು, ರಾಮಾ!" ಎಂದು ಹೇಳಿದ ಮೇಲೆ ಕಣ್ಣುಗಳು ಮುಚ್ಚಿದುವು.

ಶಂಬುಕನ ಹೆಂಡತಿಯಾದ ಕಪಿಲೆ ರಾಮನನ್ನು ನೋಡಿ, "ಸೀತಾಪತೀ! ಹೊಸತಾಗಿ ಪಟ್ಟಾಭಿಷಿಕ್ತನಾದ ನೀನು ಮುಂದೆ ಇದಿರಿಸಬೇಕಾದ ಕಠೋರ ಪರೀಕ್ಷೆಗಳಿಗೆ ಇದು ನಾಂದಿ. ನಾನು ನನ್ನ ಗಂಡನೊಂದಿಗೆ ಸಂತೋಷವಾಗಿ ಹೋಗುತ್ತಿದ್ದೇನೆ. ದೃಢಚಿತ್ತನಾಗಿ ಕರ್ತವ್ಯಪಾಲನೆ ಮಾಡು ಶ್ರೀರಾಮಾ" ಎಂದು ಹೇಳುತ್ತ, ಗಂಡನ ಚಿತೆಯಲ್ಲಿ ಪ್ರವೇಶಿಸಿ ಸಹಗಮನ ಮಾಡಿದಳು.

ಅಲ್ಲಿಂದ ಹಿಂದಿರುಗಿ ಬರುವ ದಾರಿಯಲ್ಲಿ ರಾಮನು ಒಂದು ಮರದ ಪೊಟರೆಯನ್ನು ನೋಡಿದನು. ಅದೊಂದು ಗೂಗೆಯ ಪೊಟರೆಯಾಗಿತ್ತು. ಆ ಗೂಗೆಯನ್ನು ಓಡಿಸಿ ದುರಾಕ್ರಮಣ ಮಾಡಿದ ಹದ್ದಿನ ಸಂಗತಿ ರಾಮನಿಗೆ ತಿಳಿಯಿತು. ಅದನ್ನು ಶಿಕ್ಷಿಸುವಂತೆ ರಾಮನು ಕೈಯಿಂದ ಹದ್ದಿನ ತಲೆಯ ಮೇಲೆ ತಟ್ಟಿದನು. ಕೂಡಲೇ ಆ ಹದ್ದು ಮಾಯವಾಗಿ, ಆ ಸ್ಥಳದಲ್ಲಿ ಬ್ರಹ್ಮದತ್ತನೆಂಬ ರಾಜನು ಶಾಪವಿಮೋಚನೆಗೊಂಡು ಪ್ರತ್ಯಕ್ಷನಾಗಿ, ರಾಮನಿಗೆ ವಂದಿಸಿ ಹೊರಟುಹೋದನು.

ರಾಮನು ಅಯೋಧ್ಯೆಗೆ ಹಿಂದಿರುಗಿದಾಗ, ಸತ್ತ ಬ್ರಾಹ್ಮಣ ಕುಮಾರನು ಬದುಕಿ ಎದ್ದಿದ್ದನು.

ಒಂದು ದಿನ ವಿಶ್ವಾಮಿತ್ರನು ರಾಮನ ಸಭಾಸ್ಥಾನಕ್ಕೆ ಬಂದು, ತನ್ನನ್ನು ಅವಮಾನಪಡಿಸಿದ ಶಕುಂತರಾಜನನ್ನು ವಧಿಸಬೇಕೆಂದು ರಾಮನನ್ನು ಕೇಳಿಕೊಂಡನು. ಇದು ರಾಮನ ಗುರುವಿನ ಆಜ್ಞೆ.

ಮರುಕ್ಷಣದಲ್ಲೇ ರಾಮನು ಶಕುಂತನನ್ನು ವಧಿಸಲು ಹೊರಟನು.

ಇದನ್ನು ತಿಳಿದ ಶಕುಂತನು ಹನುಮಂತನ ತಾಯಿಯಾದ ಅಂಜನಾದೇವಿಗೆ ಶರಣಾರ್ಥಿಯಾಗಿ,




ಅವಳಿಂದ ಅಭಯದಾನ ಪಡೆದನು. ತಾಯಿಯ ಮಾತನ್ನು ಮೀರಲಾಗದ ಹನುಮಂತನು, ಶಕುಂತನನ್ನು ರಕ್ಷಿಸುವ ಭಾರ ಹೊತ್ತು, ರಾಮನ ಬಾಣಕ್ಕೆ ಇದಿರಾಗಿ ಕಣ್ಣುಮುಚ್ಚಿ ನಿಂತು ತನ್ನ ಎದೆಯನ್ನೊಡ್ಡಿದನು. ರಾಮನು ಪ್ರಯೋಗಿಸಿದ ಬಾಣಗಳೆಲ್ಲ ಹನುಮಂತನ ಎದೆಯೊಳಗೆ ಲೀನವಾದುವು.

ಇದನ್ನೆಲ್ಲ ನೋಡಿ ವಿಶ್ವಾಮಿತ್ರನು ದುರಾಗ್ರಹವನ್ನು ಬಿಟ್ಟು, ಶಕುಂತನನ್ನು ಮನ್ನಿಸಿ ಆಶೀರ್ವಾದ ಮಾಡಿ, ತನ್ನ ಪಾಡಿಗೆ ಹೊರಟುಹೋದನು.

ಮತ್ತೊಂದು ದಿನ ಅರ್ಧರಾತ್ರಿಯ ಹೊತ್ತಿನಲ್ಲಿ ಒಂದು ನಾಯಿ, ಅರಮನೆಯ ಬಾಗಿಲಿಗೆ ಬಂದು ತನಗೆ ನ್ಯಾಯಬೇಕೆಂದು ಆರ್ತನಾದ ಮಾಡತೊಡಗಿತು. ರಾಮನು ತಟಕ್ಕನೆದ್ದು ಹೊರಗೆ ಬಂದು ನೋಡಿದನು. ರಕ್ತ ಸುರಿಯುತ್ತಿದ್ದ ನಾಯಿಯ ಶರೀರದಲ್ಲಾದ ಗಾಯವನ್ನು ಒತ್ತಿ ಹಿಡಿದನು.

ನಾಯಿ ತನ್ನ ಸಮಾಚಾರವನ್ನು ಹೇಳಿಕೊಂಡಿತು. ಅದು ಪೂರ್ವಜನ್ಮದಲ್ಲಿ ದೇವಾಲಯದ ಅರ್ಚಕನಾದ ಮನುಷ್ಯನಾಗಿದ್ದಿತಂತೆ. ಆಗ ಮಾಡಿದ ಪಾಪದಿಂದಲೇ ಅದು ನಾಯಿಯಾಗಿ ಹುಟ್ಟಿತಂತೆ. ಈಗ ಕಾರಣವೇನಿಲ್ಲದೆ ತನ್ನನ್ನು ಹೀಗೆ ಹೊಡೆದ ಒಡೆಯನನ್ನು ದೇವಾಲಯದ ಅರ್ಚಕನಾಗಿ ನಿಯಮಿಸಬೇಕೆಂದು ಅದು ಕೇಳಿಕೊಂಡಿತು. ಅದೇ ಅವನಿಗೆ ತಕ್ಕ ಶಿಕ್ಷೆ ಎಂಬುದು ನಾಯಿಯ ಅಭಿಪ್ರಾಯ. ರಾಮನು ಹಾಗೇ ಮಾಡುವೆನೆಂದು ಹೇಳಿದ ಕೂಡಲೇ, ಅದರ ನೋವೆಲ್ಲಾ ಮಾಯವಾಗಿ ಸಂತೋಷದಿಂದ ಹೊರಟುಹೋಯಿತು.

ಹಾಗಿರುವಾಗ ಅಲ್ಪಮತಿಯೊಬ್ಬನು ತನ್ನ ಹೆಂಡತಿಗೆ ಬಯ್ಯುವಾಗ, "ಪರಪುರುಷನ ಮನೆಯಲ್ಲಿದ್ದ ಹೆಂಡತಿಯನ್ನು ತಂದು ಇಟ್ಟುಕೊಳ್ಳುವಂಥ ರಾಮನಂಥವನು ನಾನಲ್ಲ," ಎಂದ ಮಾತು, ಕಿವಿಯಿಂದ ಕಿವಿಗೆ ಹೋಗಿ, ರಾಮನ ಕಿವಿಗೂ ಬಿದ್ದಿತು.

ಅದನ್ನು ತಾಳಲಾಗದೆ ರಾಮನು ಅಗ್ನಿಪೂತಳಾದ ಸೀತೆಯನ್ನು ಅರಣ್ಯದಲ್ಲಿ ಬಿಟ್ಟುಬರುವಂತೆ ಲಕ್ಷ್ಮಣನಿಗೆ ಆಜ್ಞೆ ಮಾಡಿದನು. ಲಕ್ಷ್ಮಣನು ಆತ್ಮಾಕ್ರೋಶದಿಂದ ಅಂಥಾ ಕೆಲಸವು ಸಲ್ಲದೆಂದು ಹೇಳಲು, ರಾಮನು "ಎಲೋ ಲಕ್ಷ್ಮಣಾ, ಒಬ್ಬ ಅಲ್ಪನ ಬಾಯಿಯಿಂದ ಅಂತಹ ಮಾತು ಹೊರಡಬೇಕಾದರೆ ಅನೇಕ ಮಂದಿಯ ಮನಸ್ಸಿನೊಳಗೆ ಹಾಗೊಂದು ಭಾವನೆ ಇದೆಯೆಂದು ಅಯಿತು. ಪಾತ್ರದ ಅನ್ನದ ಹದನೋಡಲು ಒಂದಗುಳೇ ಸಾಕು. ರಾಜ್ಯವೆಂದರೆ ಭೂಮಿಯಲ್ಲ; ಮನುಷ್ಯರೇ. ಪ್ರಜೆಗಳನ್ನು ಪಾಲಿಸುವುದೆಂದರೆ ಕತ್ತಿಯ ಅಲಗಿನ ಮೇಲೆ ನಡೆಯುವುದೇ, ಅಲ್ಲಿ ಸ್ವಾರ್ಥಕ್ಕೆ ತಾವಿಲ್ಲ. ಜನವಾಕ್ಯವನ್ನು ಗೌರವಿಸಿ ಕರ್ತವ್ಯಪಾಲನೆ ಮಾಡುವುದೇ ರಾಜಧರ್ಮ. ನನ್ನ ಆಜ್ಞೆಯನ್ನು ನೆರವೇರಿಸುವುದು ನಿನ್ನ ಧರ್ಮ." ಎಂದನು ರಾಮ.

ಸೀತೆ ಮುನಿಪತ್ನಿಯರೊಂದಿಗೆ ಆಶ್ರಮಗಳಲ್ಲಿ



ತಿರುಗಾಡಿ ಬರಬೇಕೆಂದು ಒಂದೆರಡು ಬಾರಿ ರಾಮನೊಂದಿಗೆ ಹೇಳಿದ್ದಳು. ಅದನ್ನೇ ನೆಪಮಾಡಿ ಲಕ್ಷ್ಮಣನು ರಥದ ಮೇಲೆ ಸೀತೆಯನ್ನು ಕರೆದುಕೊಂಡು ಹೋಗಿ, ಅರಣ್ಯದಲ್ಲಿ ಬಿಟ್ಟು ಹಿಂದಿರುಗಿ ಬಂದು, "ಅಯ್ಯೋ! ಆ ದಿನ ಹನುಮಂತನು ಸಂಜೀವಿನಿಯನ್ನು ತಂದು ನನ್ನನ್ನು ಬದುಕಿಸಿದ್ದು ಈ ಕಟು ಕಾರ್ಯಕ್ಕಾಗಿಯೇನಾ?" ಎಂದು ಎದೆಯೊಡೆಯುವಂತೆ ರೋದಿಸಿದನು.

ಸೀತೆಯನ್ನು ನೋಡಿ ವಾಲ್ಮೀಕಿ ಮಹರ್ಷಿ ತನ್ನ ಆಶ್ರಮಕ್ಕೆ ಕರೆದುಕೊಂಡು ಹೋದನು. ಅಲ್ಲಿ ಸೀತೆ, ಕುಶ ಮತ್ತು ಲವ ಎಂಬ ಅವಳಿಜವಳಿ ಕುಮಾರರನ್ನು ಹಡೆದಳು.

ಮುಂದೆ ಅಯೋಧ್ಯಾ ನಗರದಲ್ಲಿ ಅನಾವೃಷ್ಟಿಯುಂಟಾಗಿ ಜನರು ಕಷ್ಟಕ್ಕೆ ಬಿದ್ದರು. ನೆಲವೆಲ್ಲಾ ಒಣಗಿ ಒಡೆದೊಡೆದು ಹೋಯಿತು. ಸೀತಾವಿಯೋಗದಿಂದ ಒಳಗೊಳಗೇ ಕುದಿಯುತ್ತಿದ್ದ ರಾಮನಿಗೆ ಅಶ್ವಮೇಧ ಯಾಗ ಮಾಡಬೇಕೆಂದು ಹಿರಿಯರು ಆದೇಶ ಮಾಡಿದರು. ಬಂಗಾರದಿಂದ ಸೀತೆಯ ವಿಗ್ರಹವನ್ನು ಮಾಡಿಸಿ ರಾಮನು ಯಾಗದೀಕ್ಷೆ ಹಿಡಿದನು.

ಕುಶಲವರು ವಾಲ್ಮೀಕಿ ರಚಿಸಿದ ರಾಮಾಯಣ ಕಾವ್ಯವನ್ನು ಗಾನಮಾಡುತ್ತ ಅಯೋಧ್ಯೆಗೆ ಬಂದರು. ತಾವು ಮುನಿಬಾಲಕರೆಂದು ಹೇಳಿಕೊಂಡ ಆ ಹುಡುಗರನ್ನು ನೋಡಿ ರಾಮನು, ಅತ್ಯಂತ ವಾತ್ಸಲ್ಯದಿಂದ ಅವರನ್ನು ಆಲಿಂಗಿಸಿ, ಮುದ್ದು ಗುಲುಕುವ ಮಾತುಗಳನ್ನಾಡಿ, ಕಾಣಿಕೆಗಳನ್ನು ಕೊಟ್ಟು ಕಳುಹಿಸಿದನು.

ರಾಮನ ಅಶ್ವಮೇಧಯಾಗಾಶ್ವವನ್ನು ಕುಶಲವರು ಹಿಡಿದು ಕಟ್ಟಿ ಹಾಕಿದರು.

ಯಾಗಾಶ್ವದ ಹಿಂದೆ ಬಂದಿದ್ದ ಭರತ, ಲಕ್ಷ್ಮಣ, ಶತ್ರುಘ್ನರು ಕುಶಲವರೊಂದಿಗೆ ಯುದ್ಧ ಮಾಡಬೇಕಾಯಿತು. ಆ ಹುಡುಗರ ಬಾಣದೇಟುಗಳಿಂದ ಭರತ, ಲಕ್ಷ್ಮಣ, ಶತ್ರುಘ್ನರು ಮೂರ್ಛೆ ಹೋಗಿ ಬಿದ್ದರು. ಆಮೇಲೆ ರಾಮನೇ ಕುಶಲವರೊಂದಿಗೆ ಯುದ್ಧ ಮಾಡಿದನು.

ಕುಶಲವರು ಯುದ್ಧಮಾಡುತ್ತ, ತಾಯಿಯ ಹೆಸರಿನಲ್ಲಿ ಆಣೆಮಾಡಿ ಬಾಣ ಬಿಡಲು, ರಾಮನು ಮೂರ್ಛೆ ಹೋಗಿ ಬಿದ್ದನು. ಸೀತೆ ಬಂದು ರಾಮನನ್ನು ಉಪಚರಿಸಿದಳು. ರಾಮನೊಂದಿಗೆ ಎಲ್ಲರೂ ಮೂರ್ಛೆಯಿಂದ ಎಚ್ಚೆತ್ತರು.

ವಾಲ್ಮೀಕಿ ಎಲ್ಲಾ ಸಂಗತಿಯನ್ನೂ ರಾಮನೊಂದಿಗೆ ಹೇಳಿ ಕುಮಾರರನ್ನೂ, ಸೀತೆಯನ್ನೂ ರಾಮನಿಗೆ ಒಪ್ಪಿಸಿದನು. ರಾಮನು ಸೀತೆಯೊಂದಿಗೆ ಸಿಂಹಾಸನವನ್ನೇರಿ, ಕುಶಲವರನ್ನು ತೊಡೆಗಳ ಮೇಲೆ ಕುಳ್ಳಿರಿಸಿಕೊಂಡನು. ಅನಂತರ ಅವರಿಗೆ ಯುವರಾಜ ಪಟ್ಟಾಭಿಷೇಕವನ್ನೂ ಮಾಡಿದನು.

ಸೀತೆ ರಾಮನ ಅಪೇಕ್ಷೆಯಂತೆ ಮಹಾಪ್ರಜೆಗಳ ಮುಂದೆ ನಿಂತುಕೊಂಡು, ಆಕಾಶವನ್ನು ನೋಡಿ,



ಮನಸ್ಸಿನಲ್ಲಿ ತನ್ನ ಪಾತಿವ್ರತ್ಯದ ಮೇಲೆ ಶಪಥ ಹಾಕಿ, ಮಳೆ ಬರಬೇಕೆಂದು ಕೇಳಿಕೊಂಡಳು. ಮರುಕ್ಷಣದಲ್ಲಿ ಆಕಾಶವು ಕಾರ್ಮೋಡಗಳಿಂದ ಕೂಡಿ, ಅಮೃತ ಜಲಧಾರೆ ಸುರಿಸಿತು.

ಆಮೇಲೆ ಸೀತೆ ನೆಲವನ್ನು ನೋಡುತ್ತ "ಅಮ್ಮಾ, ರಘುವಂಶ ದೀಪಕರಾದ ಕುಮಾರರು ತಂದೆಯ ತೊಡೆಯನ್ನು ಸೇರಿಕೊಂಡುದಾಯಿತು. ನನ್ನ ಕರ್ತವ್ಯ ತೀರಿತು. ನನ್ನ ಕೆಲಸ ಇನ್ನೇನಿಲ್ಲ. ನನ್ನನ್ನು ಸ್ವೀಕರಿಸಿಕೋ ತಾಯೇ !" ಎಂದಳು.

ಭೂಮಿ ನಡುಗಿತು. ಹಾಗೆಯೇ ಎರಡು ಭಾಗವಾಗಿ ಸೀಳಿತು. ಆ ಸೀಳಿನೊಳಗಿನಿಂದ ದಿವ್ಯ ಕಾಂತಿ ಹೊರಟಿತು. ರತ್ನಸಿಂಹಾಸನದ ಮೇಲೆ ಆಸೀನಳಾಗಿದ್ದ ಭೂದೇವಿ ಮೇಲೆದ್ದು ಬಂದು, ಸೀತೆಯನ್ನು ಎರಡು ಕೈಗಳಿಂದ ಬಾಚಿ ಎತ್ತಿ ತನ್ನ ಮಡಿಲಲ್ಲಿರಿಸಿಕೊಂಡು ಭೂಮಿಯೊಳಗೆ ಹೊರಟು ಹೋದಳು. ಪುಷ್ಪವೃಷ್ಟಿ ಸುರಿಯುತ್ತಿರಲು, ಭೂಮಿ ಎಂದಿನಂತೆ ಮುಚ್ಚಿಕೊಂಡಿತು. ಜನರೆಲ್ಲಾ ಬಹಳ ಹೊತ್ತಿನವರೆಗೆ ಚಿತ್ರಪ್ರತಿಮೆಗಳಾದರು.

ಆಗ ರಾಮನು ಮಹೋಗ್ರನಾಗಿ ಭೂಮಿಯನ್ನು ಪುಡಿಮಾಡಿ ಹಾಕುವೆನೆಂದು ಕೋದಂಡವನ್ನು ಹಿಡಿದು ಎತ್ತಿದನು. ಅಷ್ಟರಲ್ಲಿ "ರಾಮಾ ! ಶಾಂತನಾಗು ! ಭೂಜಾತೆಯಾದ ಸೀತೆ ತನ್ನ ತಾಯಿಯನ್ನು ಸೇರಿ ನಿನ್ನನ್ನು ಕಾಯುತ್ತಿದ್ದಾಳೆ. ನೀನೂ ಕರ್ತವ್ಯದ ಪ್ರಜ್ಞೆ ತಂದುಕೋ !" ಎಂದು ಆಕಾಶವಾಣಿ ಮೊಳಗಿತು.

ರಾಮನು ಶಾಂತನಾಗಿ ಕುಮಾರರನ್ನು ನೋಡುತ್ತ, ಬಹಳಕಾಲ ರಾಜ್ಯವನ್ನು ಆಳಿಕೊಂಡಿದ್ದನು. ಹಾಗಿರುವಾಗ ಒಂದು ದಿನ ಯಮಧರ್ಮ ರಾಜನು ಬ್ರಾಹ್ಮಣ ವೇಷದಲ್ಲಿ ರಾಮನ ಬಳಿಗೆ ಬಂದು. ದೇವರಹಸ್ಯವನ್ನು ಹೇಳಲು ಬಂದೆನೆಂದೂ, ಲಕ್ಷ್ಮಣನು ಬಾಗಿಲು ಕಾಯುತ್ತ ಯಾರನ್ನೂ ಒಳಗೆ ಬಿಡಬಾರದೆಂದೂ, ಬಿಟ್ಟರೆ ಮರಣವೇ ದಂಡನೆಯೆಂದೂ ಹೇಳಿ ರಾಮನನ್ನು ಒಪ್ಪಿಸಿದನು. ಲಕ್ಷ್ಮಣನು ದ್ವಾರದಲ್ಲಿ ನಿಂತಿರಲು, ಯಮನು ನಿಜರೂಪದಿಂದ ರಾಮನೊಂದಿಗೆ, ಅವನು ಅವತರಿಸಿದ ಕೆಲಸ ಮುಗಿಯಿತೆಂದು ಹೇಳಿ, ವೈಕುಂಠದಲ್ಲಿ ಕಾಯುವ ಲಕ್ಷ್ಮೀದೇವಿಯನ್ನು ಸೇರಬೇಕೆಂಬುದನ್ನು ನೆನಪು ಮಾಡಿದನು.

ಅದೇ ಸಮಯದಲ್ಲಿ ದೂರ್ವಾಸನು ಬಂದು, ಲಕ್ಷ್ಮಣನೊಂದಿಗೆ ತತ್‌ಕ್ಷಣದಲ್ಲಿಯೇ ರಾಮನನ್ನು ನೋಡಬೇಕೆಂದು ಹೇಳಿದನು. ಒಳಗೆ ಬಿಡದಿದ್ದರೆ ರಘುವಂಶವೇ ನಾಶವಾಗುವಂತೆ ಶಪಿಸುವುದಾಗಿ ಬೆದರಿಸಿದನು. ಲಕ್ಷ್ಮಣನು ನಿರುಪಾಯವಾಗಿ ದೂರ್ವಾಸನನ್ನು ಒಳಗೆಬಿಟ್ಟು, ಹಿಂದಿರುಗಿ ನೋಡದೆಯೇ ಹೋಗಿ ಸರಯೂ ನದಿಯಲ್ಲಿ ಮುಳುಗಿ ಮಾಯವಾಗಿ ಹೋದನು. ಯಮನ ಆದೇಶದಂತೆ ರಾಮನು ಕುಶಲವರಿಗೆ ಪಟ್ಟಾಭಿಷೇಕ ಮಾಡಿ,



ಅವರಿಂದ ರಾಜ್ಯಪಾಲನೆ ಸುಗಮವಾಗುವಂತೆ ಮಾಡಿದನು. ಅನಂತರ ಶ್ರಾವಣ ಮಾಸದಲ್ಲಿ ಸರಿಯೂ ನದಿ ನೆರೆದುಂಬಿ ಪ್ರವಹಿಸುತ್ತಿರಲು, ಹುಣ್ಣಿಮೆಯ ದಿನ ಚಂದ್ರಗ್ರಹಣ ಪರ್ವಕಾಲವೂ ಸೇರಲು, ಮಂಗಳ ತೂರ್ಯನಾದಗಳು ಮೊಳಗುತ್ತಿರಲು, ಎರಡು ಬದಿಗಳಲ್ಲಿ ಭರತ ಶತ್ರುಘ್ನರು ನಡೆಯುತ್ತಿರಲು, ರಾಮನು ಸರಯೂ ನದಿಯ ಕಡೆಗೆ ಹೊರಟನು. ಅಶೇಷ ಪ್ರಜಾನೀಕವೂ ಅನುಸರಿಸಿಕೊಂಡಿದ್ದಿತು.

ಹೋಗಿ ಹೋಗಿ ರಾಮನು ನದೀಜಲದೊಳಗೆ ಪ್ರವೇಶಮಾಡಿದನು. ಹಿಂದೆಯೇ ಅವನ ತಮ್ಮಂದಿರೂ ಇಳಿದರು. ಆಗಲೇ ಗ್ರಹಣಬಿಟ್ಟು ಹೋಗಿ ತುಂಬು ಚಂದ್ರಬಿಂಬವು ದೇದೀಪ್ಯಮಾನವಾಗಿ ಪ್ರಕಾಶಿಸಿತು. ಆಕಾಶದಿಂದ ಜಲಜಲನೆ ಹೂವಿನ ಮಳೆ ಸುರಿಯಿತು. ಸಾಮ, ದೇವಗಾಂಧಾರ, ಹಿಂದೋಳ, ಸುರುಟಿ ರಾಗಗಳ ಮೇಳವಿಕೆಯೊಂದಿಗೆ ವೀಣಾನಾದಗಳು ನಾಲ್ಕು ದಿಕ್ಕುಗಳಿಂದಲೂ ಕೇಳಿಸಿದುವು.

ಎಂಟು ದಿಕ್ಕುಗಳೂ ಬೆಳುದಿಂಗಳ ರಾಶಿಯಂತೆ ತೋರಿದುವು. ಸುರಿಯುತ್ತಿದ್ದ ಹೂವಿನ ಮಳೆಯಿಂದ ಸರಯೂ ನದಿ ಕ್ಷೀರಸಾಗರದಂತೆ ಆ ಹೂಗಳ ತೆರೆಗಳಿಂದ ಬೆಟ್ಟದಷ್ಟೆತ್ತರಕ್ಕೆ ಚಲಿಸಿಕೊಂಡು ಹೋಯಿತು.

ಅದಕ್ಕೆ ಮೊದಲೇ ಕ್ಷೀರಸಾಗರದಲ್ಲಿ ಲಕ್ಷ್ಮಣನು ಶೇಷತಲ್ಪವಾಗಿ, ಸೀತೆ ಲಕ್ಷ್ಮೀದೇವಿಯಾಗಿ ಮಹಾವಿಷ್ಣುವನ್ನು ಇದಿರು ನೋಡಿಕೊಂಡಿದ್ದರು. ಭರತ ಶತ್ರುಘ್ನರು ಶಂಖಚಕ್ರಗಳಾಗಿ ಮಹಾವಿಷ್ಣುವಿನ ಕೈಗಳನ್ನು ಅಲಂಕರಿಸಿದರು. ವಿಷ್ಣು ಶೇಷತಲ್ಪದಲ್ಲಿ ಅರ್ಧಶಾಯಿತನಾಗಲು, ಲಕ್ಷ್ಮಿ ಅವನ ಪಾದಗಳನ್ನು ತನ್ನ ಕರಕಮಲಗಳಲ್ಲಿ ತೆಗೆದುಕೊಂಡು ತನ್ನ ತೊಡೆಗಳ ಮೇಲೆ ಇರಿಸಿಕೊಂಡಳು.

ಮಾಯಾಮಾನುಷ ವಿಗ್ರಹನಾಗಿ, ಉತ್ತಮ ಮಾನವನಾಗಿ, ಪಿತೃವಾಕ್ಯ ಪರಿಪಾಲನೆಗಾಗಿ ವನವಾಸಮಾಡಿ ಕಾರ್ಯಸಾಧಕನಾಗುವುದು ಹೇಗೆಂಬುದನ್ನು ತೋರಿಸಿದನು ರಾಮಾವತಾರದಲ್ಲಿ. ಸಹಾಯಕರಾಗಿ ವಾನರರನ್ನು ಕೂಡಿಸಿಕೊಂಡನು. ವಾರಿಧಿಯನ್ನು ಕಟ್ಟಿದನು. ಅಜೇಯನೆಂದು ಬೀಗಿಕೊಂಡಿದ್ದ ರಾವಣನನ್ನು ಹತಮಾಡಿ, ರಾಕ್ಷಸರ ದುಷ್ಪರಿಪಾಲನೆಯನ್ನು ಅಂತ್ಯಗೊಳಿಸಿದನು. ಸೀತೆಯನ್ನು ತಂದು ಏಕಪತ್ನೀವ್ರತಸ್ಥನಾಗಿ ಆದರ್ಶ ಪರಿಪಾಲನೆ ಮಾಡಿದ ರಾಮನ ಅವತಾರವು, ವಿಷ್ಣುವಿನ ದಶಾವತಾರಗಳಲ್ಲಿ ವಿಶೇಷವಾದುದೆಂದು ಕೀರ್ತಿಸಲ್ಪಡುತ್ತಿದೆ. ರಾಮರಾಜ್ಯವೆಂಬ ಹೆಸರು ಆಚಂದ್ರಾರ್ಕಸ್ಥಾಯಿಯಾಗಿದೆ.

ಸೂತಪುರಾಣಿಕನು ಹೀಗೆ ರಾಮಾವತಾರವನ್ನು ಮುಗಿಸಿದ ಮೇಲೆ, ಶೌನಕಾದಿಗಳಿಗೆ ಕೃಷ್ಣಾವತಾರವನ್ನು ಹೇಳಲು ಪ್ರಾರಂಭಿಸಿದನು.

ಶಿವನು ತನ್ನ ಭಕ್ತರಾದ ದಾನವ ಪ್ರಮುಖರನ್ನೆಲ್ಲಾ ವಿಷ್ಣು ಅವಲೀಲೆಯಾಗಿ ಅಂತ್ಯಗೊಳಿಸುವುದನ್ನು ನೋಡಿ, ಹುಬ್ಬು ಸುರುಗಿಸಿಕೊಂಡನು. ಆಗ ಆ ಕುಪಿತ ಶಿವನ ಕಣ್ಣುಬೊಂಬೆಗಳೆಡೆಯಿಂದ ಸಹಸ್ರಕವಚನೆಂಬ ಘೋರಾಕಾರದವನೊಬ್ಬನು ಉದ್ಭವಿಸಿ ಹೊರಬಿದ್ದನು. ಅವನ ಶರೀರದಲ್ಲಿ ಒಂದರ ಮೇಲೊಂದು ಪೊರೆಗಳಂತೆ ಸಾವಿರ ಕವಚಗಳಿದ್ದುವು. ಅಜೇಯವಾದ ಪ್ರಭಾವವನ್ನೊಳಗೊಂಡ ಕುಂಡಲಗಳು ಅಂಟಿಕೊಂಡಿದ್ದುವು. ಹುಟ್ಟಿದ ಕೂಡಲೇ ಅವನು ಭೀಕರವಾದ ಗರ್ಜನಾಧ್ವನಿಯಿಂದ, "ನಾನು ಬುದ್ಧಿಗೇಡಿಗಳಾದ ರಾಕ್ಷಸಮಾತ್ರನೇನಲ್ಲ. ರುದ್ರಾಂಶಸಂಭೂತನಾಗಿದ್ದೇನೆ. ಕೈಲಾಗುವವನಾಗಿದ್ದರೆ ಆ ವಿಷ್ಣು ನನ್ನನ್ನು ಏನು ಮಾಡುವನೋ ಮಾಡುವಂತೆ ಹೇಳಿರಿ!" ಎಂದು ಎಂಟು ದಿಕ್ಕುಗಳೂ ನಡುಗುವ ಹಾಗೆ ಕೂಗಿ ಹೇಳಿದನು. ಅವನ ವಿಜೃಂಭಣೆಯಿಂದ ಲೋಕಗಳೆಲ್ಲಾ ನಡುಗಿದುವು.

ಆಗ ವಿಷ್ಣು ನರನಾರಾಯಣರೆಂಬ ಜಂಟಿ ಋಷಿಗಳಾಗಿ ಅವತರಿಸಿದನು. ಆ ನರನಾರಾಯಣರು ಸಹಸ್ರ ಕವಚನನ್ನು ಜಯಿಸುವ ಶಕ್ತಿಗಳ ಸಾಧನೆಗಾಗಿ ಬಹುದೊಡ್ಡ ತಪಸ್ಸುಮಾಡಲು ತೊಡಗಿದರು. ಇಂದ್ರನು ಅವರಾರೆಂಬುದನ್ನರಿಯದೆ, ಅವರ ತಪಸ್ಸನ್ನು ಕೆಡಿಸಲು ಅಪ್ಸರಸಿಯರನ್ನು ಕಳುಹಿಸಿಕೊಟ್ಟನು. ನಾರಾಯಣನು ತನ್ನ ತೊಡೆಯಿಂದ ಊರ್ವಶಿಯನ್ನು ಹುಟ್ಟಿಸಿದುದನ್ನು ನೋಡಿ, ರಂಭಾದಿ ಅಪ್ಸರಸಿಯರು ನಾಚಿ ನಿರ್ವಿಣ್ಣರಾದರು. ಇಂದ್ರನು ನರನಾರಾಯಣರ ಮುಂದೆ ಓಡಿಬಂದು ಮಣಿದು ಕ್ಷಮಾಪಣೆ ಕೇಳಿದನು. ನಾರಾಯಣನು ಊರ್ವಶಿಯನ್ನು ಕರೆದುಕೊಂಡು ಹೋಗುವಂತೆ ಹೇಳಿ, ಅವಳನ್ನು ಇಂದ್ರನೊಂದಿಗೆ ಕಳುಹಿಸಿಕೊಟ್ಟನು. ಹಾಗೆ ಊರ್ವಶಿ ಸ್ವರ್ಗ ಸೇರಿದಳು.

ನರನಾರಾಯಣರು, ಒಬ್ಬರು ತಪಸ್ಸು ಮಾಡುವಾಗ, ಇನ್ನೊಬ್ಬರು ಸಹಸ್ರ ಕವಚನೊಂದಿಗೆ ಹೋರಾಡುತ್ತ, ಈ ವಿಧವಾಗಿ ಸಾವಿರ ವರ್ಷಗಳವರೆಗೆ ಮಾಡಿದರು. ಅಷ್ಟು ಹೊತ್ತಿಗೆ ಸಹಸ್ರ ಕವಚನ ಒಂಬೈನೂರ ತೊಂಬತ್ತೊಂಬತ್ತು ಕವಚಗಳು ಭೇದಿಸಲ್ಪಟ್ಟುವು.

ಕಡೆಗೆ ಸಹಸ್ರ ಕವಚನು ಒಂದೇ ಒಂದು ಕವಚದೊಂದಿಗೆ ಓಡಿಹೋಗಿ ಸೂರ್ಯನೊಳಗೆ ಹುದುಗಿಕೊಂಡನು.

"ಪ್ರಗಲ್ಭ ಪ್ರಲಾಪಮಾಡಿ ಕೊನೆಗೆ ಓಡಿಹೋಗಿಬಿಟ್ಟನು. ಕೈಲಾಗದ ಹೇಡಿ! ಇವನ ಕೆಲಸ ಕೃಷ್ಣಾವತಾರದಲ್ಲಿ ನೋಡುತ್ತೇನೆ!" ಎಂದು ವಿಷ್ಣು ನಿಶ್ಚಯಿಸಿಕೊಂಡನು.





# ಸಮರ್ಥನು

ಹಿಂದೆ ದಂತಪುರವನ್ನು ಮಹಾರಾಜಾ ಪದ್ಮನಂದನು ಆಳಿಕೊಂಡಿದ್ದನು. ಅವನಿಗೆ ಆಗಾಗ ಮಾರುವೇಷದಲ್ಲಿ ದೇಶಸಂಚಾರ ಮಾಡುವ ಪದ್ಧತಿ ಇದ್ದಿತು. ಹಾಗೆ ಒಂದು ಸಾರಿ ಅವನು ಯಾವುದೋ ಒಂದು ಗ್ರಾಮದಲ್ಲಿರುವಾಗ, ಅಕಸ್ಮಾತ್ತಾಗಿ ಕಾಯಿಲೆ ಬಿದ್ದನು. ಆ ಗ್ರಾಮದಲ್ಲಿದ್ದ ಸೀತಾರಾಮನೆಂಬ ರೈತನು ಪದ್ಮನಂದನನ್ನು ಯಾರು ಏನೆಂಬುದನ್ನೂ ವಿಚಾರಿಸದೆ, ಸಮಯಕ್ಕೆ ಸರಿಯಾಗಿ ಆದರಿಸಿ, ವೈದ್ಯ ಉಪಚಾರಗಳನ್ನು ಕೂಡಾ ಮಾಡಿಸಿದನು. ಮೂರು ದಿನಗಳವರೆಗೆ ಅಲ್ಲಿಯೇ ಇದ್ದಮೇಲೆ, ರಾಜನ ಆರೋಗ್ಯ ಸುಧಾರಿಸಿತು.

ತಾನು ಹೊರಡುವ ಮೊದಲು ಪದ್ಮನಂದನು ತಾನು ಇಂಥವನೆಂದು ಹೇಳದೆ, "ನೀನು ಪರಕೀಯನಾದ ನನಗೆ ಮಾಡಿದ ಉಪಕಾರ ಎಂದೆಂದಿಗೂ ಮರೆಯುವಂತಹುದಲ್ಲ. ರಾಜಧಾನಿಯಲ್ಲಿ ನನಗೆ ಒಳ್ಳೆಯ ಮಾತಿನವಾಸಿಯಿದೆ. ರಾಜನು ಕೂಡಾ ನನ್ನ ಮಾತನ್ನು ತೆಗೆದುಹಾಕುವವನಲ್ಲ. ನಿನಗೆ ಏನು ಪ್ರತ್ಯುಪಕಾರವಾಗಬೇಕೋ ನಿರ್ದಾಕ್ಷಿಣ್ಯವಾಗಿ ಕೇಳು. ಮಾಡಿಸುತ್ತೇನೆ" ಎಂದನು.

ರೈತನು ವಿನಯದಿಂದ, "ನನಗೆ ಅಂತಹ ಕೋರಿಕೆಗಳಾವುದೂ ಇಲ್ಲವಯ್ಯ. ನಾನು ನನ್ನ ಕರ್ತವ್ಯವಷ್ಟೇ ಮಾಡಿದ್ದೇನೆ. ನನ್ನ ಎರಡನೇ ಮಗ ದಂಡಕನದೇ ನನಗೆ ಚಿಂತೆ. ಅವನಿಗೆ ನಾನು ವ್ಯವಸಾಯದಲ್ಲಿ ಪಳಗಿಸದೆ ಓದುಬರೆಹಗಳನ್ನೇ ಕಲಿಸಿಬಿಟ್ಟೆನು. ಈಗ ಅವನು ವ್ಯವಸಾಯ ಮಾಡಲಾರೆ ಅನ್ನುತ್ತಾನೆ. ಎಲ್ಲಿಯಾದರೂ ಪ್ರಭುತ್ವದ ಉದ್ಯೋಗದಲ್ಲಿ ಸೇರಿಸೋಣವೆಂದರೆ ಅವನ ತಲೆ ಬಿರುಸು ಗುಣದಿಂದ ಅಧಿಕಾರಿಗಳನ್ನು ಧಿಕ್ಕರಿಸಿಬಿಡುತ್ತಾನೆ. ಇಂಥಾ ಜಗಳಗಂಟಿ ಗರ್ವಿಷ್ಟ ಮಗನು ಮುಂದೆ ಹೇಗೆ ಬದುಕಿ ಬಚಾವಾಗುತ್ತಾನೋ ಅಂತ ನನಗೆ ಬಹಳ ಚಿಂತೆಯಾಗಿದೆ" ಎಂದನು,

ಕೂಡಲೇ ಪದ್ಮನಂದನು, "ನಿನ್ನ ಆ ಮಗನನ್ನು ನನ್ನೊಂದಿಗೆ ಕಳುಹಿಸು. ಅವನನ್ನು ನೋಯಿಸದೆ ಹೇಗೆ ಸರಿದಾರಿಗೆ ತರಬೇಕೆಂಬುದು ನನಗೆ ಗೊತ್ತಾಗದಿರದು. ತಂದೆಗೆ ಗೊತ್ತಾಗದ ಉಪಾಯ ಪರರಿಗೆ ಗೊತ್ತಾಗುತ್ತದೆ. ಅವನ ಭವಿಷ್ಯತ್ತು ಒಳ್ಳೆಯದಾಗುವ ಹಾಗೆ ನಾನು ತಿದ್ದಿ ಸರಿಪಡಿಸುತ್ತೇನೆ. ಇನ್ನು ಅವನ ವಿಷಯದಲ್ಲಿ ಚಿಂತೆಯೇ ಬೇಡ" ಎಂದನು.

"ವಸುಂಧರ"



ರಾಜಧಾನಿಗೆ ಹೋಗಬೇಕೆಂದು ದಂಡಕನಿಗೆ ಬಹಳ ಆಸೆ ಇದ್ದಿತು. ತಂದೆ ಅವನನ್ನು ಸಂತೋಷ ವಾಗಿ ಪದ್ಮನಂದನೊಡನೆ ಕಳುಹಿಸಿಕೊಟ್ಟನು.

ರಾಜಧಾನಿಯನ್ನು ಸೇರಿದ ಮೇಲೆ ರಾಜನು ದಂಡಕನಿಗೆ ಒಂದು ಛತ್ರದಲ್ಲಿ ಬಿಡಾರದ ಏರ್ಪಾಡು ಮಾಡಿಸಿದನು. ಅಲ್ಲಿಯವರೆಗೆ ಪ್ರಯಾಣ ಮಾಡಿದಾಗ ಗೊತ್ತಾದ ಅನುಭವದಿಂದ, ದಂಡಕನು ನಿಜವಾಗಿಯೂ ದುಡುಕುಗಾರನೂ, ಮುಂಗೋಪಿಯೂ ಎಂದು ರಾಜನಿಗೆ ತಿಳಿಯಿತು. ಇಂಥವನು ಆಸ್ಥಾನದ ಕೆಲಸಕ್ಕೆ ಉಪಯೋಗವಿಲ್ಲವೆಂದೂ ಗೊತ್ತಾಯಿತು. ಆದರೂ ತನ್ನನ್ನು ನಂಬಿವ ಒಳ್ಳೆಯ ಸ್ವಭಾವದ ರೈತನಿಗೆ ಕೊಟ್ಟ ಮಾತನ್ನು ನಡೆಸಲೇ ಬೇಕಾಗಿತ್ತು.

ದಂಡಕನನ್ನು ಛತ್ರದಲ್ಲಿ ಇರಿಸಿದ ಮೇಲೆ ಪದ್ಮನಂದನ ರಾಜನು ಶಮಂತಕನೆಂಬ ಅಧಿಕಾರಿಯನ್ನು ಕರೆಯಿಸಿದನು. ಶಮಂತಕನು ರಾಜ್ಯದೊಳಗಿನ ಆದಾಯ ವ್ಯಯಗಳ ಲೆಕ್ಕಗಳನ್ನು ಪರಿಶೀಲಿಸುವ ಅಧಿಕಾರಿಯಾಗಿದ್ದನು. ಅವನ ಕೆಳಗೆ ಹತ್ತು ಮಂದಿ ಸಣ್ಣ ಉದ್ಯೋಗಸ್ಥರಿದ್ದರು. ಪ್ರತಿಯೊಬ್ಬರಿಗೂ ಹನ್ನೆರಡು ಮಂದಿ ಬರವಣಿಗೆಗಾರರಿದ್ದರು. ಶಮಂತಕನು ಬಹಳ ಸಮರ್ಥನಾದ ಅಧಿಕಾರಿಯೆಂದೂ, ಎಂಥವರಿಂದಾದರೂ ಕೆಲಸ ಮಾಡಿಸುವವನೆಂದೂ ಆಸ್ಥಾನದಲ್ಲಿ ಎಲ್ಲರೂ ಹೇಳುವರು.

ಪದ್ಮನಂದನು ಶಮಂತಕನೊಂದಿಗೆ, "ದಂಡಕನೆಂಬ ಯುವಕನನ್ನು ನೀನು ಕೆಲಸಕ್ಕೆ ತೆಗೆದುಕೊಳ್ಳಬೇಕು. ಅವನು ಸ್ವಲ್ಪ ಗರ್ವಿಷ್ಟ ಹುಡುಗ. ದುಡುಕು ಸ್ವಭಾವ. ಕೆಲಸ ಹೋಗುವುದೆಂಬ ಭಯವೇನೂ ಅವನಿಗೆ ಬರುವುದಿಲ್ಲ. ಶಿಕ್ಷೆಗಳಿಗೆ ಹೆದರದಿರುವ ಮೊಂಡುತನವೂ ಅವನಿಗಿದೆ. ನೀನು ಸಮರ್ಥನಾದ ಅಧಿಕಾರಿ ಎಂದು ಹೆಸರು ಪಡೆದವನು. ಅವನನ್ನು ಕೆಲಸಕ್ಕೆ ಒಳಪಡಿಸಬೇಕಾದುದು ನಿನಗೊಂದು ಪರೀಕ್ಷೆ" ಎಂದನು.

"ಆಗಲಿ ಪ್ರಭುಗಳೇ. ಅವನನ್ನು ತಪ್ಪದೆ ನಾನು ಸರಿಪಡಿಸಿಬಿಡುತ್ತೇನೆ. ಕಳುಹಿಸಿ ಕೊಡಿರಿ" ಎಂದನು ಶಮಂತಕ ವಿನಯದಿಂದ.

ಮರುದಿನ ದಂಡಕನು ಶಮಂತಕನ ಬಳಿಗೆ ಬರಲ್ಪಟ್ಟನು. ಮೊದಲು ಶಮಂತಕನು ಅವನಿಗೆ ಕೆಲವು ಪ್ರಶ್ನೆಗಳನ್ನು ಕೇಳಿದನು. ಎಲ್ಲ ಪ್ರಶ್ನೆಗಳಿಗೂ ದಂಡಕನಿಂದ ಗರ್ವದ ಉತ್ತರಗಳೇ ಬಂದುವು. ಆದರೂ ಶಮಂತಕನು ಸ್ವಲ್ಪವೂ ಕೋಪವನ್ನು ತೋರಿಸದೆ, "ಭೇಷ್! ನೀನು ನನಗೆ ತುಂಬಾ ಹಿಡಿಸಿದವನು. ನಿನ್ನಿಂದ ನನಗೆ ತುಂಬಾ ಪ್ರಯೋಜನವಿದೆ. ಅದಕ್ಕಾಗಿ ನಿನ್ನನ್ನು ಇನ್ನೊಬ್ಬರಿಗೆ ಒಪ್ಪಿಸುತ್ತೇನೆ. ನಿನಗೆ ತಿಂಗಳಿಗೆ ಐವತ್ತು ವರಹ ಸಂಬಳ ಕೊಡಿಸುತ್ತೇನೆ. ಸಂತೋಷ ತಾನೇ?" ಎಂದು ಕೇಳಿದನು. ಇದಕ್ಕೆ ದಂಡಕನು ಬಹಳ ಸಂತೋಷದಿಂದ ತಲೆಯಾಡಿಸಿದನು.

ಶಮಂತಕನು ತನ್ನ ಕೈಕೆಳಗಿನ ಚಿಕ್ಕ ಅಧಿಕಾರಿಯನ್ನು ಕರೆದು, "ಅವರು ಹೇಳಿದ ಹಾಗೆ ಕೇಳಿಕೊಂಡಿರು" ಎಂದು ಹೇಳಿ ದಂಡಕನನ್ನು ಅವನ ವಶಕ್ಕೆ ಕೊಟ್ಟನು.

ಎರಡು ದಿನಗಳ ಮೇಲೆ ಆ ಸಣ್ಣ ಅಧಿಕಾರಿ ಶಮಂತಕನ ಬಳಿಗೆ ಬಂದು, "ಅಯ್ಯಾ, ಆ ದಂಡಕನು ಕೆಲಸವೇನೂ ಮಾಡುವುದೇ ಇಲ್ಲ. ಇತರರನ್ನು ಕೆಲಸ ಮಾಡಲು ಬಿಡುವುದೂ ಇಲ್ಲ. ಅವನಿಂದ ಎಲ್ಲರಿಗೂ ಬಹಳ ತೊಂದರೆಯೇ. ಅವನನ್ನು ಇಟ್ಟುಕೊಂಡು ಸಮಾಳಿಸಲು ನನ್ನಿಂದಾಗದು. ಕ್ಷಮಿಸಬೇಕು" ಎಂದನು.

ಅದನ್ನು ಕೇಳಿ ಶಮಂತಕನು ಕೋಪದಿಂದ, "ನಿನ್ನ ಕೆಳಗಿನವರಿಂದ ಕೆಲಸ ಮಾಡಿಸಲು ನಿನ್ನಿಂದಾಗದಿದ್ದರೆ ಅದು ನಿನ್ನ ಅಸಮರ್ಥತೆಯೆಂದೇ ಅರ್ಥ. ಹೇಗಾದರೂ ನೀನು ಅವನಿಂದ ಕೆಲಸ ಮಾಡಿಸಲೇಬೇಕು. ಇಲ್ಲದಿದ್ದರೆ ಅವನ ಕೆಲಸ ಕೂಡಾ ನೀನೇ ಮಾಡು! ಹೋಗು!" ಎಂದನು.

ಆ ದಿನ ಆ ಚಿಕ್ಕ ಅಧಿಕಾರಿ ದಂಡಕನ ಕೆಲಸ ಕೂಡಾ ತಾನೇ ಮಾಡತೊಡಗಿದನು. ಈ ಕಾರಣದಿಂದ ದಂಡಕನ ಮೇಲೆ ಅವನಿಗೆ ಬಹಳ ಕೋಪ ಉಂಟಾಯಿತು. ದಿನಾ ಅವನನ್ನು ಮಾತಿನಿಂದ ಹೆದರಿಸುತ್ತಾ ಇರುವನು.

"ನಿನ್ನ ಸಂಗತಿಯನ್ನು ಮಹಾರಾಜರು ತಿಳಿದುಬಿಟ್ಟರೆ ನಿನ್ನನ್ನು ಕಠಿಣವಾಗಿ ಶಿಕ್ಷಿಸಿ ಬಿಡುತ್ತಾರೆ. ಇಲ್ಲಿನ ಶಿಕ್ಷೆಗಳು ಸಹಿಸಲಾಗದಂಥಾದ್ದು! ಹೋಗಲಿ ಅಂತ ಸುಮ್ಮನಿದ್ದೇನೆ! ಜಾಗರೂಕನಾಗಿರು" ಎನ್ನುತ್ತಿದ್ದನು ಚಿಕ್ಕ ಅಧಿಕಾರಿ.

ದಂಡಕನು ಆ ಬೆದರಿಕೆಗಳನ್ನು ಲೆಕ್ಕಿಸುತ್ತಿರಲಿಲ್ಲ. ರಾಜನು ಕೊಡುವ ಶಿಕ್ಷೆಗಳು ಹೇಗಿರುತ್ತವೆಂಬುದನ್ನು ಮಾತ್ರ ಕದ್ದುನೋಡಿ ತಿಳಿದುಕೊಂಡನು. ಅವೆಲ್ಲ ಚಿಕ್ಕ ಅಧಿಕಾರಿ ಹೇಳಿದಂತೆ ಕಠಿಣವಾಗಿರುವುದು ಸುಳ್ಳಲ್ಲವೆಂದು ತಿಳಿಯಿತು.

ಕೆಲವು ದಿನಗಳ ಮೇಲೆ ಪದ್ಮನಂದನ ರಾಜನು ಶಮಂತಕನನ್ನು ಕರೆಯಿಸಿ, "ದಂಡಕನು ಹೇಗೆ





ಕೆಲಸ ಮಾಡುತ್ತಾನೆ? ದಾರಿಗೆ ಬಂದಿದ್ದಾನೆಯೇ? ಸ್ವಲ್ಪಮಟ್ಟಿಗಾದರೂ ಕೆಲಸದ ಮೇಲೆ ಆಸಕ್ತಿ ಹುಟ್ಟಿದೆಯೆ?" ಎಂದು ಕೇಳಿದನು.

"ಹುಟ್ಟದೇ ಏನು ಪ್ರಭೂ? ತಾವು ಚಿಂತಿಸ ಬೇಕಾಗಿಲ್ಲ" ಎಂದನು ವಿನಯದಿಂದ ಶಮಂತಕ.

ರಾಜನು ಆ ಮಾತಿಗೆ ತೃಪ್ತಿಪಡದೆ, ರಹಸ್ಯವಾಗಿ ದಂಡಕನನ್ನು ಕುರಿತು, ವಿವರಗಳನ್ನು ತಿಳಿದು, ಶಮಂತಕನನ್ನು ತನ್ನ ಬಳಿಗೆ ಕರೆದು, "ನಾನು ಕೇಳಿದ್ದಕ್ಕೆ ದಂಡಕನ ವಿಷಯ ಹಾರಿಸಿ ಉತ್ತರ ಹೇಳಿದಿ. ನೀನು ಅವನಲ್ಲಿ ಯಾವ ಬದಲಾವಣೆ ಯನ್ನೂ ತರಲಿಲ್ಲ. ನಿನ್ನ ಅಧಿಕಾರ ಬಲದಿಂದ ನಿನ್ನ ಕೈಕೆಳಗಿನ ಪಾಪದ ಅಧಿಕಾರಿಯನ್ನು ಬೆದರಿಸಿ, ಅವನಿಗೆ ಬೇರೆ ಕಷ್ಟ ಕೊಟ್ಟಿರುವಿ" ಎಂದನು ಕೋಪದಿಂದ.

"ಅವನು ಪಾಪದವನೇನಲ್ಲ ಪ್ರಭುಗಳೇ. ಅಧಿ ಕಾರಿಯಾದವನು ದಂಡಕನಂಥವನಿಂದ ಕೆಲಸ ಮಾಡಿಸ ಲಾಗದೆ ಹೋದರೆ ಅಸಮರ್ಥನೆಂದೇ ಆಯಿತು; ಅದಕ್ಕೆ ಶಿಕ್ಷೆಯಾಗಿ ಅವನೇ ಕಷ್ಟಪಡುತ್ತಾನೆ. ಅಷ್ಟೇ" ಎಂದನು ಶಮಂತಕ.

"ಆ ಅಧಿಕಾರಿಯಿಂದ ಆಗದೇ ಹೋದ ಪಕ್ಷದಲ್ಲಿ ದಂಡಕನನ್ನು ಬೇರೊಬ್ಬ ಸಮರ್ಥನಾದ ಅಧಿಕಾರಿಯ ಬಳಿಗೆ ಕಳುಹಿಸಬಹುದಿತ್ತಲ್ಲಾ? ಒಬ್ಬನೇ ಆಗ ಬೇಕೆಂದೇನಿದೆ?" ಎಂದನು ರಾಜ.

"ದಂಡಕನ ಸಂಗತಿ ಅವರೆಲ್ಲರಿಗೂ ಗೊತ್ತಾಗಿದೆ. ಅವರಾರೂ ಅವನನ್ನು ಕೆಲಸಕ್ಕೆ ತೆಗೆದುಕೊಳ್ಳ ಲಾರರು" ಎಂದನು ಶಮಂತಕ.

"ಹಾಗಾದರೆ ನೀನು ನನ್ನ ಪರೀಕ್ಷೆಯಲ್ಲಿ ಸೋತಿ ರುವೆ, ಹೌದಾ?" ಎಂದನು ರಾಜ.

"ಇಲ್ಲ ಮಹಾ ಪ್ರಭೂ. ತಾವು ನನಗೆ ಪ್ರತ್ಯೇಕ ವಾಗಿ ಒಬ್ಬ ಮನುಷ್ಯನನ್ನು ಕೊಟ್ಟಿದ್ದೀರಿ. ಆಗಿ ನಿಂದಲೂ ಪ್ರತ್ಯೇಕವಾಗಿ ಒಬ್ಬ ಮನುಷ್ಯನು ಮಾಡುವ ಕೆಲಸ ನಡೆಯುತ್ತಲೇ ಇದೆ. ನನ್ನ ಮಟ್ಟಿಗೆ ಅದೂ ಪ್ರಭು ಸೇವೆಯೇ ಆಯಿತು." ಎಂದನು ಶಮಂತಕ.

"ಹಾಗೆ ದಂಡಕನು ಬದುಕಿಕೊಂಡಿದ್ದರೆ ಸಾಲದು. ಅವನ ಮನಸ್ಸನ್ನು ಮಾರ್ಪಡಿಸಿ ಕೆಲಸಮಾಡಿಸಿಕೊಳ್ಳ ಬೇಕು. ಹಾಗೆ ಮಾಡಿದರೇನೇ ನೀನು ಸಮರ್ಥ ನಾದ ಅಧಿಕಾರಿ" ಎಂದನು ರಾಜ.

"ನನಗೆ ಇನ್ನೂ ಕೆಲವು ದಿನಗಳ ಗಡುವು ಕೊಡಿರಿ. ನನ್ನ ಸಮರ್ಥತೆಯನ್ನು ನಿರೂಪಿಸು ತ್ತೇನೆ" ಎಂದನು ಶಮಂತಕ.

ರಾಜಾ ಪದ್ಮನಂದನು ಅದಕ್ಕೆ ಅನುಜ್ಞೆಕೊಟ್ಟನು.

ಶಮಂತಕನು ಮರುದಿನ ದಂಡಕನನ್ನು ತನ್ನ ಬಳಿಗೆ ಕರೆದು, "ನಿನಗೆ ರಾಜಾಸ್ಥಾನದಲ್ಲಿ ಉದ್ಯೋಗ ಮಾಡಬೇಕೆಂದು ಇದೆಯೋ ಇಲ್ಲವೋ?" ಎಂದು ಕೇಳಿದನು.

ದಂಡಕನಿಗೆ ರಾಜಾಸ್ಥಾನವು ಹಿಡಿಸಿತ್ತು. ರಾಜ ಧಾನಿಗೆ ಬಂದು ಬಾಡಿಗೆ ಮನೆಯಲ್ಲಿದ್ದರೂ

ಇಪ್ಪತ್ತೈದು ವರಹಗಳು ಕೂಡಾ ಖರ್ಚಾಗುತ್ತಿದ್ದಿಲ್ಲ. ಗ್ರಾಮದಲ್ಲಿರುವುದಕ್ಕಿಂತ ಪಟ್ಟಣದ ಜೀವಿತ ಒಳ್ಳೇದಾಗಿಯೇ ಇತ್ತು. ಅಂತಲೇ ಇರಲು ಇಷ್ಟವಿದೆಯೆಂದೇ ಹೇಳಿದನು.

ಶಮಂತಕನು ಸ್ವಲ್ಪ ಹೊತ್ತು ಆಲೋಚನೆಮಾಡಿ, "ನೀನು ಗರ್ವಿಷ್ಟನೆಂದೂ, ಬಹಳ ಪೊಗರಿನವನೆಂದೂ ನಿನ್ನ ಅಧಿಕಾರಿ ಹೇಳುತ್ತಾನೆ. ನಾನು ಆ ಮಾತು ನಂಬುವುದಿಲ್ಲ ಬಿಡು. ತಮಗಿಂತ ಹುಶಾರಾಗುವವರನ್ನು ನೋಡಿದರೆ ಕೆಲವು ಅಧಿಕಾರಿಗಳಿಗೆ ಹಾಗೆ ಕಾಣುತ್ತದೆ. ನೀನು ಮೇಲಕ್ಕೆ ಬರಬಾರದೆಂತಲೇ ಅಂಥವರು ನೋಡುತ್ತಾರೆ. ನಿನ್ನಲ್ಲಿ ನನಗೆ ವಿನಯ ಗುಣವೇ ಕಾಣುತ್ತದೆ. ಸ್ವಲ್ಪಕಾಲ ನಾನೇ ನಿನ್ನ ಸಮರ್ಥತೆಯನ್ನು ಪರೀಕ್ಷೆ ಮಾಡುತ್ತೇನೆ. ಆ ಅಧಿಕಾರಿ ಹೇಳಿದ ಮಾತಿನಲ್ಲಿ ನಿಜವಿದ್ದರೆ ನಿನ್ನನ್ನು ಕೆಲಸದಿಂದ ತೆಗೆದು ಹಾಕುತ್ತೇನೆ. ನೀನು ಸಮರ್ಥನೆಂದು ರುಜುವಾಗಿ ಬಿಟ್ಟರೆ ಆ ಅಧಿಕಾರಿಯನ್ನೇ ಉದ್ಯೋಗದಿಂದ ತೆಗೆದು ಹಾಕುತ್ತೇನೆ. ಅಷ್ಟೇ ಅಲ್ಲದೆ ನಿನ್ನ ಸಂಬಳವನ್ನೂ ಹೆಚ್ಚಿಸುತ್ತೇನೆ" ಎಂದನು.

ಆ ದಿನದಿಂದ ದಂಡಕನಲ್ಲಿ ಊಹಿಸಲಾಗದಷ್ಟು ಬದಲಾವಣೆ ಕಂಡು ಬಂತು. ಕೆಲವೇ ದಿನಗಳಲ್ಲಿ ಅವನು ಕೆಲಸದಲ್ಲಿ ಸಮರ್ಥನೆಂದು ಒಳ್ಳೆಯ ಹೆಸರನ್ನೂ ಪಡೆದನು.

ಈ ಸಂಗತಿಯನ್ನು ಕೇಳಿ ರಾಜನು ಆಶ್ಚರ್ಯಪಟ್ಟು, ಶಮಂತಕನನ್ನು ಕರೆಯಿಸಿ, "ದಂಡಕನಲ್ಲಿ ಇಷ್ಟು ಮಾರ್ಪಾಡನ್ನು ಹೇಗೆ ತೆಗೆದುಕೊಂಡು ಬಂದಿ ?" ಎಂದು ಕೇಳಿದನು.

"ಅವನಿಗೆ ಮೊದಲು ರಾಜಾಸ್ಥಾನದಲ್ಲಿರುವ ಸುಖ ಸೌಕರ್ಯಗಳು ಏನೆಂಬುದನ್ನು ತಿಳಿಯಪಡಿಸಿದೆನು. ಆಮೇಲೆ ಅವನ ಅಧಿಕಾರಿ ಅವನ ಮೇಲೆ ಫಿರ್ಯಾದಿ ಮಾಡುತ್ತಾನೆಂದೂ, ತಾನು ಅದನ್ನು ನಂಬುವುದಿಲ್ಲವೆಂದೂ ಹೇಳಿದೆನು. ಅವನು ನಿಜಕ್ಕೂ ಸಮರ್ಥನಾದರೆ ಚಿಕ್ಕ ಅಧಿಕಾರಿಯನ್ನು ತೊಲಗಿಸಿ ಹಾಕುತ್ತೇನೆಂತಲೂ ಹೇಳಿದೆನು. ಅವನಿಗೆ ಆ ಅಧಿಕಾರಿ ಕೆಟ್ಟವನೆನಿಸಿದ್ದರಿಂದಾಗಿ, ಆ ಬಗೆಯ ಆ ವೈರದಿಂದ, ಅವನು ಶ್ರದ್ಧೆಯಿಂದ ಕೆಲಸಮಾಡಲು ತೊಡಗಿದನು. ಹೀಗೆ ಒಂದು ಸಾರಿ ಕೆಲಸಕ್ಕೆ ತೊಡಗಿದರೆ, ಅಭ್ಯಾಸವಾಗಿ, ಕಡೆಗೆ ಈಗ ಎಲ್ಲಾ ಉದ್ಯೋಗಸ್ಥರ ಹಾಗೇ ತಯಾರಾದನು" ಎಂದನು ಶಮಂತಕ.

ದಂಡಕನ ತಂದೆಗೆ ತಾನು ಕೊಟ್ಟ ಮಾತು ಪೂರ್ತಿಯಾಗಿ ನೆರವೇರಿದುದಕ್ಕೆ ರಾಜನಿಗೆ ತೃಪ್ತಿಯಾಯಿತು. ಶಮಂತಕನನ್ನು ಒಳ್ಳೆಯ ರೀತಿಯಲ್ಲಿ ಸತ್ಕರಿಸಿ, ದಂಡಕನ ತಂದೆಗೂ ಒಳ್ಳೆಯ ಸಮಾಚಾರವನ್ನು ಕಳುಹಿಸಿದನು.



## ಫೋಟೋ ಶೀರ್ಷಿಕೆಯ ಸ್ಪರ್ಧೆ : : ಬಹುಮಾನ ರೂ. ೫೦

ಗೆದ್ದ ಶೀರ್ಷಿಕೆಗಳು ೧೯೮೪ ಜೂನ್ ಸಂಚಿಕೆಯಲ್ಲಿ ಪ್ರಕಟವಾಗುತ್ತವೆ.



S. G. Seshagiry



Mohan kumar Sharma

★ ಮೇಲಿನ ಫೋಟೋಗಳಿಗೆ ಸರಿಹೊಂದುವಂತೆ ಒಂದು ವಾಕ್ಯದಲ್ಲಾಗಲೀ, ಸಂಬಂಧಿಸಿದಂತಿರುವ ಎರಡು ವಾಕ್ಯಗಳಲ್ಲಾಗಲೀ ಶೀರ್ಷಿಕೆ ಬರೆಯಬೇಕು. ★ ಏಪ್ರಿಲ್ ೧೦ ರೊಳಗೆ ಶೀರ್ಷಿಕೆಗಳು ನಮಗೆ ತಲಪಬೇಕು. ಆಮೇಲೆ ಬಂದ ಶೀರ್ಷಿಕೆಗಳು ಪರಿಶೀಲಿಸಲ್ಪಡುವುದಿಲ್ಲ. ★ ಶೀರ್ಷಿಕೆಗಳಲ್ಲಿ ಅತ್ಯುತ್ತಮವೆಂದು ನಾವು ನಿರ್ಧರಿಸುವ ಒಂದು ಜತೆಗೆ ರೂ. ೫೦ ಬಹುಮಾನ. ★ ಶೀರ್ಷಿಕೆಗಳನ್ನು ಪೋಸ್ಟ್ ಕಾರ್ಡಿನಲ್ಲೇ ಬರೆಯಬೇಕು. ಅದರಲ್ಲಿ ಬೇರೆ ವಿಷಯ ಬರೆಯಬಾರದು.

ವಿಳಾಸ : ಚಂದಮಾಮ ಫೋಟೋ ಶೀರ್ಷಿಕೆಯ ಸ್ಪರ್ಧೆ, ಮದರಾಸು–೬೦೦ ೦೨೬

---

### ಫೆಬ್ರವರಿ ಸ್ಪರ್ಧೆಯ ಫಲಿತಾಂಶ :

ಮೊದಲನೇ ಫೋಟೋ : ಏನೋ ಕಲಿತವನಿಗೆ ಸದಾ ಉತ್ಸಾಹ!

ಎರಡನೇ ಫೋಟೋ : ಏನೂ ಕಲಿಯದವನಿಗೆ ಯಾವಾಗಲೂ ಚಿಂತೆ.

ಕಳುಹಿಸಿದವರು : ಕೆ. ಎನ್. ಕುಲಕರ್ಣಿ, ಹೆಲ್ತ್‌ಕ್ಯಾಂಪ್, ಗದಗ, ಬೆಟಗೇರಿ.

ಬಹುಮಾನ ರೂ. ೫೦/– ಈ ತಿಂಗಳ ಆಖೈರಿನೊಳಗೆ ಕಳುಹಿಸಲಾಗುವುದು

### ನಿಮಗೆ ಗೊತ್ತೇ ? ಉತ್ತರಗಳು :

೧. ಬಾಣನು, ಹರ್ಷ ಚರಿತ್ರ ಮತ್ತು ಕಾದಂಬರಿ ಎಂಬ ಗ್ರಂಥಗಳನ್ನು ಬರೆದನು. ೨. ರಾಬರ್ಟ್ ಬ್ರೌನಿಂಗ್. ಎಲಿಜಬೆತ್ ಬಾರೆಟ್ ಬ್ರೌನಿಂಗ್. ೩. ಚಾರ್ಲೆಟ್ ಬ್ರಾಂಟೀ ೪. ಹನ್ಸ್ ಕ್ರಿಸ್ಟಿಯನ್ ಯಾಂಡರ್ಸನ್. ೫. ವಿಲಿಯಂ ಷೇಕ್ಸ್‌ಪಿಯರ್.

Printed by B. V. REDDI at Prasad Process Private Ltd., and Published by B. VISWANATHA REDDI for CHANDAMAMA CHILDREN'S TRUST FUND (Prop. of Chandamama Publications) 188, Arcot Road, Madras-600 026 (India). Controlling Editor: NAGI REDDI.